ಕನ್ನಡ ಶೈಕ್ಷಣಿಕ ಮಾಸ ಪತ್ರಿಕೆ

# ಸಾಮಾನ್ಯ ಜ್ಞಾನ

ಕನ್ನಡ ರಾಜ್ಯೋತ್ಸವ ವಿಶೇಷಾಂಕ, ಪುಟ ೩೨, ರೂ.೧/-
[೧-೧೧-೧೯೮೩ ರರಿಂದ ೧-೧೧-೧೯೮೪ ರವರಗೆ]



ಡಾ॥ ಕೋಟ ಶಿವರಾಮ ಕಾರಂತ ಇವರಿಗೆ ಅರ್ಪಣೆ

ಸಂಪಾದಕ: ಕೊಂಡಜ್ಜಿ ಕೆ. ವೆಂಕಟೇಶ್

# ಮನವಿ

ಪ್ರಿಯ ಓದುಗರೆ,

ಒಂದೂವರೆ ವರ್ಷಗಳಿಂದ 'ಸಾಮಾನ್ಯಜ್ಞಾನ' ಪತ್ರಿಕೆಯನ್ನು ನೀವು ಕೊಂಡು ಓದಿ ಬೆಳೆಸುತ್ತಿದ್ದೀರಿ. ಕೆಲವು ಓದುಗರು ಆಜೀವ ಸದಸ್ಯರಾಗಿದ್ದಾರೆ. ಮತ್ತೆ ಕೆಲವರು ವಾರ್ಷಿಕ ಚಂದಾದಾರರಾಗಿದ್ದಾರೆ ಹಾಗೂ ಇನ್ನೂ ಕೆಲವರು ಪ್ರತಿ ತಿಂಗಳು ಪತ್ರಿಕೆಯನ್ನು ಕೊಂಡು ತಮ್ಮ ಅಮೂಲ್ಯ ಸಲಹೆಗಳನ್ನು ಕೊಟ್ಟಿದ್ದಾರೆ. ನಿಮ್ಮಗಳ ಈ ಪ್ರೋತ್ಸಾಹವೇ 'ಸಾಮಾನ್ಯ ಜ್ಞಾನ'ದ ಪ್ರಗತಿಗೆ ದಾರಿ. ಆದುದರಿಂದ ತಮ್ಮ ಈ ಪ್ರೋತ್ಸಾಹವನ್ನು ಮುಂದೆಯೂ ನೀಡುತ್ತೀರೆಂದು ಭರವಸೆಯಿದೆ.

'ಸಾಮಾನ್ಯ ಜ್ಞಾನ'ಕ್ಕೆ ಆಜೀವ ಸದಸ್ಯರಾಗುವವರು ರೂ. ೧೦೧/- ಗಳನು ಕಳಿಸಿಕೊಡಿ. ಆಜೀವ ಸದಸ್ಯರಿಗೆ ಹತ್ತು ರೂ. ಮೌಲ್ಯದ ಒಂದು ಪುಸ್ತಕವನ್ನು ಉಚಿತವಾಗಿ 'ಸಾಮಾನ್ಯಜ್ಞಾನ'ದ ಉಡುಗೊರೆಯಾಗಿ ನೀಡಲಾಗುವುದು.

ವಾರ್ಷಿಕ ಚಂದಾ ರೂ. 10/– ಹಣವನ್ನು ಎಂ. ಓ. ಮೂಲಕ ಕಳಿಸಿ ಕೊಡಬೇಕು. ಎಂ. ಓ. ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ತಪ್ಪದೇ ಬರೆಯಬೇಕು.

ಇಂತು, ವಂದನೆಗಳು — ನಿಮ್ಮ ಸಂಪಾದಕ.

---

ಭಾರತದ ಪ್ರಧಾನಿ : ಶ್ರೀಮತಿ ಇಂದಿರಾಗಾಂಧಿ

ಬ್ರಿಟನ್ನಿನ ಪ್ರಧಾನಿ : ಶ್ರೀಮತಿ ಮಾರ್ಗರೇಟ್ ಥ್ಯಾಚರ್

ಭಾರತದ ಅಧ್ಯಕ್ಷರು : ಶ್ರೀ ಗ್ಯಾನಿ ಜೈಲ್‌ಸಿಂಗ್

ಪಾಕೀಸ್ಥಾನದ ಅಧ್ಯಕ್ಷ : ಜಿಯಾ ಉಲ್‌ಹಕ್

ಭಾರತದ ಉಪಾಧ್ಯಕ್ಷರು : ಹಿದಾಯತ್ ಉಲ್ಲಾ

ಸಂಗ್ರಹ ಜೆ. ನಾಗೇಶ್ (10ವರ್ಷ)

---

# ಸಾಮಾನ್ಯಜ್ಞಾನ

ಕನ್ನಡ ಶೈಕ್ಷಣಿಕ ಮಾಸ ಪತ್ರಿಕೆ

ಕನ್ನಡ ರಾಜ್ಯೋತ್ಸವದ ವಿಶೇಷಾಂಕ

(ನವೆಂಬರ್ ೧, ೧೯೮೩ ರಿಂದ ನವೆಂಬರ್ ೧, ೧೯೮೪ ರವರೆಗೆ)


## "ಕನ್ನಡ ರಾಜ್ಯೋತ್ಸವ"

ಕನ್ನಡ ನಾಡು, ಕನ್ನಡ ನುಡಿ, ಕನ್ನಡ ಜನಪದ ಇವು ಕರ್ನಾಟಕದ ಹೆಮ್ಮೆಯ ನುಡಿಮುತ್ತುಗಳು. ನಮ್ಮ ಕನ್ನಡ ನಾಡು ಪ್ರಾಚೀನ ಪರಂಪರೆಯನ್ನು ಹೊಂದಿರುವ ಸುಂದರ ನಾಡು. ಕಲೆ, ಸಾಹಿತ್ಯ, ಸಂಗೀತ-ಅಭಿಮಾನದ ತವರು. ಇಂಥ ನಾಡಿನಲ್ಲಿ ಈ ಪರಂಪರೆಯಲ್ಲಿ ಜನಿಸಿದ ಕನ್ನಡಿಗ ತನ್ನ ಭಾಷೆಗಾಗಿ, ತನ್ನ ನಾಡಿನ ಹಾಗೂ ತನ್ನ ಪರಂಪರೆಯ ಉಳುವಿಗಾಗಿ ಇಂದು ಹೋರಾಡಬೇಕಾಗಿದೆ. ರಾಜಕೀಯದ ಸೋಂಕು ನುಡಿಗೆ ತಾಕುತ್ತಿದೆ. ಸಂಸ್ಕೃತಿಗೆ ಧಕ್ಕೆ ಉಂಟಾಗುತ್ತಿದೆ ಎನ್ನಿಸುವ ಈ ವಾತಾವರಣದಲ್ಲಿ ಕನ್ನಡಿಗ ಹೋರಾಡಬೇಕಾಗಿದೆ, ಇದಕ್ಕಾಗಿ ಕನ್ನಡ ರಾಜ್ಯೋತ್ಸವ ಆಚರಿಸಬೇಕಾಗಿದೆ. ಸ್ವಾಭಿಮಾನ ಕೆಣಕುವ ಸಂದರ್ಭದಲ್ಲೂ ಸಹನೆ! ಇದಕ್ಕೂ ಕೊನೆ ಇದೆ. ಯಾವ ತ್ಯಾಗಕ್ಕೂ ಕನ್ನಡಿಗ ಸಿದ್ಧನಾಗಬೇಕು.

ನವೆಂಬರ್ ೧, ೧೯೮೩ ರಿಂದ ನವೆಂಬರ್ ೧, ೧೯೮೪ರ ಈ ಒಂದು ವರ್ಷ ಪೂರ್ತಿ ಕನ್ನಡ ರಾಜ್ಯೋತ್ಸವದ ನೆನಪಿಗಾಗಿ ಈ ವಿಶೇಷ ಸಂಚಿಕೆ ಹೊರತರಲಾಗಿದೆ. ನಾಡಿನ ಹಿರಿಯರು ಕಿರಿಯರು ಕನ್ನಡ ರಾಜ್ಯೋತ್ಸವದ ಸಾಮಾನ್ಯ ಜ್ಞಾನ ವಿಶೇಷಾಂಕದಲ್ಲಿ ನಾಡಿನ-ನುಡಿಯ-ಬಗೆಗೆ ಉಪಯುಕ್ತ ಮಾಹಿತಿ, ಸಲಹೆ ಮತ್ತು ಅನಿಸಿಕೆಗಳನ್ನು ನೀಡಿದ್ದಾರೆ. ನುಡಿಗಾಗಿ ಸಾಮಾನ್ಯ ಜ್ಞಾನ ಸಿದ್ಧವಿದೆ.

"ಸಿರಿಗನ್ನಡಂ ಗೆಲ್ಗೆ"

**—ಸಂಪಾದಕ**

## ವಿಶೇಷ ಚಿಂತನ

ಕನ್ನಡ ನಾಡಿಗೆ ಕನ್ನಡವೇ ಗತಿ, ಅನ್ಯಥಾ ಶರಣಂ ನಾಸ್ತಿ,
ಸಂಸ್ಕೃತವಲ್ಲ, ಇಂಗ್ಲಿಷ್ ಅಲ್ಲ, ಕನ್ನಡ ಮಾತ್ರ.

—ಬಿ.ಎಂ. ಶ್ರೀಕಂಠಯ್ಯ

## ಒಳ ಪುಟಗಳಲ್ಲಿ



**ಮುಖ ಚಿತ್ರ: ಡಾ|| ಕೋಟ ಶಿವರಾಮ ಕಾರಂತ**


ಸಂಪಾದಕ, ಮುದ್ರಕ ಮತ್ತು ಪ್ರಕಾಶಕ ಕೊಂಡಜ್ಜಿ ಕೆ. ವೆಂಕಟೇಶ್,
ಕೊಂಡಜ್ಜಿ ಪ್ರಿಂಟರ್ಸ್, 216, ಸುಬ್ರಮಣ್ಯನಗರ, ಬೆಂಗಳೂರು-560021

# ಗೆಳೆತನದ ಮಾತು

ಪ್ರಿಯ ಶ್ರೀ ವೆಂಕಟೇಶ್,

ಇಂಥ ತುಟ್ಟಿಯ ಕಾಲದಲ್ಲಿಯೂ ನೀವು ಸಾಹಸ ಮಾಡಿ ಜನಸಾಮಾನ್ಯರಿಗೆ ಸಾಮಾನ್ಯ ಜ್ಞಾನ ಬೋಧನೆ ಮಾಡುವ 'ಕಾಯಕ' ಹೊತ್ತು, ಹೊರಟಿರುವುದು ಅಭಿಮಾನತಾಳುವ ಸಂಗತಿ. ಆರ್ಥಿಕ ಪರಿಸ್ಥಿತಿ ತ್ರಾಸದಾಯಕವಾಗಿದ್ದರೂ, ಜನ ಸೇವೆಯ ಉತ್ಸಾಹ ಹಾಗೂ ಶ್ರೀಸಾಮಾನ್ಯನ ಬೌದ್ಧಿಕ ಪರಿಧಿ ವಿಸ್ತರಿಸಬೇಕೆಂಬ ಹಂಬಲಗಳಿಂದ ಪ್ರೇರಿತರಾಗಿ ಹೊರಟಿರುವ ನಿಮ್ಮ ಪ್ರಯತ್ನ ಸಾರ್ಥಕವಾಗಲೆಂದು ಹಾರೈಸುವೆ. ಒಳ್ಳೆಯ ಬರಹಗಾರರನ್ನು ಕಲೆಹಾಕಬೇಕು. ಶುದ್ಧ ಜ್ಞಾನ ಪ್ರಸಾರಕ ಸಂಗತಿಗಳಿಗೇ ಮೀಸಲಾಗಬೇಕು. ಕಥೆ, ಕಾದಂಬರಿಗಳನ್ನೇ ಪತ್ರಿಕೆಗಳಲ್ಲಿ ಓದುವ ಕೆಟ್ಟ ಚಟ ನಮ್ಮ ಜನರಲ್ಲಿ ಬೆಳೆದು ಬಂದಿದೆ. ಅವರ ಮನಸ್ಸು ಲೋಕ ಪರಿಜ್ಞಾನದತ್ತ ಹರಿಯುವಂತೆ ಮಾಡಬೇಕು. ಮುಖ್ಯವಾಗಿ ಮಹಿಳೆಯರು ಮತ್ತು ಮಕ್ಕಳು ಈ ಪತ್ರಿಕೆಯಿಂದ ವಿಶೇಷ ಲಾಭ ಪಡೆಯುವಂತಾಗಬೇಕು. ಪಾಶ್ಚಾತ್ಯ ದೇಶಗಳ ಮಕ್ಕಳು ಹಾಗೂ ಮಹಿಳೆಯರಿಗಿರುವ ಲೋಕಾನುಭವ, ಸುತ್ತಣ ಪ್ರಪಂಚದ ಪರಿಚಯ, ಜ್ಞಾನವನ್ನು ಗಮನಿಸಿದರೆ, ನಮ್ಮಲ್ಲಿ ನಾವೆಷ್ಟು ಹಿಂದೆ ಇರುವೆವೆಂಬುದು ಅರ್ಥವಾಗುತ್ತದೆ. ವಿದ್ಯುತ್ತಿನ ಬಳಕೆ-ಸಣ್ಣ-ಪುಟ್ಟ ರಿಪೇರಿಗಳ ವಿಷಯವೂ ನಮಗೆ ತಿಳಿಯದು. ಸಮುದ್ರದಲ್ಲೇನಿದೆ, ಆಕಾಶದಲ್ಲಿರುವ ಅದ್ಭುತಗಳು, ದೇಹದ ಒಳಭಾಗಗಳು, ಯಂತ್ರಗಳ ಪರಿಚಯ, ಸಮಾಜಶಾಸ್ತ್ರದ ತಿಳುವಳಿಕೆ-ನಮಗೆಲ್ಲ ಬೇಕು. ಆಧುನಿಕ ಕಾಲದ ಪರಿಪೂರ್ಣ ಮಾನವನಿಗೆ ಇದೆಲ್ಲ ಅತ್ಯಾವಶ್ಯಕ. ಅದನ್ನೂ ಸರಳವಾದ ಮಾತುಗಳಲ್ಲಿ ವಿವರಿಸಿ ಹೇಳುವ ಉದ್ದೇಶ ನಿಮ್ಮ ಪತ್ರಿಕೆಯದಾಗಲಿ. ತರುಣ-ತರುಣಿ [ಜಾಣ-ಜಾಣೆಯರೆಂದರೆ ರಾಜಕೀಯ ಜಾಣ-ಜಾಣೆಯರು !!!]ಯರ ಸೇವೆಗೇ ಮೀಸಲಾಗಿರಲಿ ನಿಮ್ಮ ಪತ್ರಿಕೆ. ಪತ್ರಿಕೆ ಎಂದರೆ ತೇಗದ (ಟೀಕ್) ಮರ. ಬೆಳೆವುದೂ ನಿಧಾನ, ಬೆಲೆಯೂ ಅಪಾರ.

ಅಭಿಮಾನ ಪೂರ್ವಕ ವಂದನೆಗಳು,

ನಿಮ್ಮ ವಿಶ್ವಾಸದ

**—ಡಾ|| ಎಸ್.ಎಂ. ವೃಷಭೇಂದ್ರ ಸ್ವಾಮಿ**

ನಿರ್ದೇಶಕರು, ಕನ್ನಡ ಅಧ್ಯಯನ ಸಂಸ್ಥೆ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

## ವಿಜ್ಞಾನ ವಿಶೇಷ

| | ಅನ್ವೇಷಣೆ | ಅನ್ವೇಷಕ |
|---|---|---|
| ೧ | ಅಣುಬಾಂಬು | ಅಟೊಹಾನ್ ನೀಲ್ಸ್ ಬೋರ್ |
| ೨ | ಆಕಾಶಬುಟ್ಟಿ | ಗಾರ್ನರಿನ್ |
| ೩ | ಆಮ್ಲಜನಕ | ಪ್ರೀಸ್ಟ್ಲೆ |
| ೪ | ಉಕ್ಕು | ಬ್ರೆರ್ಲಿ |
| ೫ | ಕ್ಲೋರೋಫಾರಂ | ಸುಬೆರಾನ್ |
| ೬ | ಕ್ಯಾಮೆರಾ | ಫ್ರೈಸೆಗ್ರಿನ್ |
| ೭ | ಗಡಿಯಾರ | ಬ್ರೆಗುಟ್ |
| ೮ | ಗುರುತ್ವಾಕರ್ಷಣೆ | ನ್ಯೂಟನ್ |
| ೯ | ಗ್ರಾಮಫೋನ್ | ಥಾಮಸ್ ಆಲ್ವಾ ಎಡಿಸನ್ |
| ೧೦ | ಟ್ಯಾಂಕ್ | ಸ್ವಿಂಟನ್ |
| ೧೧ | ಟೆಲಿಫೋನ್ | ಅಲೆಕ್ಸಾಂಡರ್ ಗ್ರಹಾಂಬೆಲ್ |
| ೧೨ | ಟೆಲಿವಿಷನ್ | ಜಾನ್ ಲಾಗಿ ಬರ್ಡ್ |
| ೧೩ | ಡೀಸೆಲ್ ಇಂಜಿನ್ | ರುಡಲ್ಫ್ ಡೀಸೆಲ್ |
| ೧೪ | ಡೈನಮೈಟ್ | ನೋಬೆಲ್ |
| ೧೫ | ಡೈನಮೋ | ಮೈಕಲ್ ಫ್ಯಾರಡೇ |
| ೧೬ | ಥರ್ಮಾ ಮೀಟರ್ | ಅಪ್ಸರ್ಪೆ |
| ೧೭ | ದೂರದರ್ಶಕ | ಗೆಲಿಲಿಯೋ |
| ೧೮ | ನೈಲಾನ್ | ಕರೂಥರ್ಸ್ |
| ೧೯ | ಪೆನಿಸಿಲಿನ್ | ಅಲೆಕ್ಸಾಂಡರ್ ಫ್ಲೆಮಿಗ್ |
| ೨೦ | ಬೈಸಿಕಲ್ | ಮ್ಯಾಕೆಮಿಲನ್ |
| ೨೧ | ಬೆರಳಚ್ಚು ಯಂತ್ರ | ಮಿಟ್ಟರ್ ಹೋಫರ್ |
| ೨೨ | ಮುದ್ರಣ | ಗುಟೆನ್ ಬರ್ಗ್ |
| ೨೩ | ಮೋಟಾರ್ ಕಾರ್ | ಬಿನ್‌ಸೆಕಾರ್ಗೆ |
| ೨೪ | ಮೈಕ್ರೋಫೋನ್ | ಡೇವಿಡ್ ಹ್ಯೂಸ್ |
| ೨೫ | ರಕ್ತ ಚಲನೆ | ವಿಲಿಯಂ ಹಾರ್ವೆ |

೦

# ಕನ್ನಡ ಭಾಷೆಯು ಬಗ್ಗೆ ಕೆಲವು ಮೂಲಭೂತ ಸಂಗತಿಗಳು

ಡಾ|| ಎಂ. ಚಿದಾನಂದಮೂರ್ತಿ

೧. ಕನ್ನಡ ಒಂದು ದ್ರಾವಿಡ ಭಾಷೆ. ಕನ್ನಡ, ತಮಿಳು, ತೆಲುಗು, ಮಲೆಯಾಳಂ, ತುಳು, ತೊದ, ಕೋತ, ಬಡಗ, ಕೊಡಗು, ಕೊಲಾಮಿ, ಗದಬ, ಬ್ರಾಹೂ್ಇ, ಕುರುಖ್, ಮಾಲ್ತೊ ಇವೇ ಮೊದಲಾದ ಸುಮಾರು ೨೪ ಭಾಷೆಗಳನ್ನು ದ್ರಾವಿಡಭಾಷೆಗಳೆಂದು ಕರೆಯುತ್ತಾರೆ. ಇವು ಸಂಸ್ಕೃತ, ಹಿಂದಿ, ಕಾಶ್ಮೀರಿ, ಮರಾಠಿ, ಕೊಂಕಣಿ ಗುಜರಾತಿ, ಪಂಜಾಬಿ, ಬೆಂಗಾಲಿ, ಒರಿಯ ಮೊದಲಾದ ಆರ್ಯನ್ ಭಾಷೆಗಳಿಂದ ಬೇರೆ.ಅನೇಕ ಆರ್ಯನ್ ಪದಗಳು ದ್ರಾವಿಡ ಭಾಷೆಗಳಲ್ಲೂ ಅನೇಕ ದ್ರಾವಿಡ ಪದಗಳು ಆರ್ಯನ್ ಭಾಷೆಗಳಲ್ಲೂ ಸೇರಿ ಹೋಗಿವೆ.

೨. ದ್ರಾವಿಡ ಭಾಷೆಗಳಲ್ಲಿ ಕನ್ನಡ, ತಮಿಳು, ತೆಲುಗು, ಮಲೆಯಾಳಂ ಇವುಗಳಿಗೆ ಮಾತ್ರ ಸ್ವತಂತ್ರ ಲಿಪಿಯಿದ್ದು, ಇವುಗಳು ಅನೇಕ ನೂರು ವರ್ಷಗಳಷ್ಟು ಹಳೆಯದಾದ ಲಿಖಿತ ಸಾಹಿತ್ಯವನ್ನು ಹೊಂದಿರುತ್ತವೆ. ಉಳಿದ ಭಾಷೆಗಳಿಗೆ ಲಿಖಿತವಾದ ಹಿಂದಿನ ಸಾಹಿತ್ಯವಿಲ್ಲ.

೩. ಪ್ರಾಚೀನತೆಯ ದೃಷ್ಟಿಯಿಂದ ಭಾರತದಲ್ಲಿ ಸಂಸ್ಕೃತ ಅತ್ಯಂತ ಪ್ರಾಚೀನ ಭಾಷೆ (ಕ್ರಿ.ಪೂ. ೧೫೦೦-೧೦೦೦); ಅದನ್ನು ಬಿಟ್ಟರೆ ತಮಿಳು (ಕ್ರಿ.ಶ. ೧೦೦) ಅದನ್ನು ಬಿಟ್ಟರೆ ಕನ್ನಡ ಕ್ರಿ.ಶ. ೪೫೦).

೪. ಕನ್ನಡ ಭಾಷೆಯ ಒಂದು ಊರಿನ ಹೆಸರು ಕ್ರಿ.ಪೂ. ಮೂರನೇ ಶತಮಾನದ ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ ದೊರಕುತ್ತದೆ. ಮೊದಲ ಕನ್ನಡ ಶಾಸನ ಬೇಲೂರು ತಾಲ್ಲೂಕು ಹಲ್ಮಿಡಿ ಎಂಬ ಗ್ರಾಮದಲ್ಲಿ ದೊರಕಿದ್ದು, ಅದು "ಹಲ್ಮಿಡಿ ಶಾಸನ"ವೆಂದೇ ಪ್ರಖ್ಯಾತವಾಗಿದೆ. ಅದರ ಕಾಲ ಕ್ರಿ.ಶ. ೪೫೦: ಆ ಕಾಲಕ್ಕೆ ಕನ್ನಡ ಒಂದು ನೆಲೆ ನಿಂತ ಭಾಷೆಯಾಗಿದ್ದು, ಮುಂದೆ ಅದು ಬೆಳವಣಿಗೆಯನ್ನು ಪಡೆಯುತ್ತಾ ಹೋಯಿತು. ಆ ಶಾಸನದಲ್ಲಿ ವಿಜ ಅರಸ ಎಂಬ ವೀರನೊಬ್ಬನು ಹೋರಾಟ ನಡೆಸಿ ತನ್ನ ಕದಂಬ ದೊರೆಗೆ ಜಯವನ್ನು ಸಂಪಾದಿಸಿ ಕೊಟ್ಟದ್ದಕ್ಕೆ ದತ್ತಿ ಕೊಡಲಾಗಿದೆ.

೫. ಹಲ್ಮಿಡಿ ಶಾಸನದ ಕನ್ನಡವನ್ನು ಪೂರ್ವದ ಹಳಗನ್ನಡವೆಂದು ಕರೆಯುತ್ತಾರೆ. ಪೂರ್ವದ ಹಳಗನ್ನಡ ಭಾಷೆಯಲ್ಲಿ ಯಾವ ಸಾಹಿತ್ಯ ಕೃತಿಯೂ ಸಿಕ್ಕಿಲ್ಲ; ಕೇವಲ ಶಾಸನಗಳು ಮಾತ್ರ ಲಭ್ಯವಾಗಿವೆ.

೬. ಪೂರ್ವದ ಹಳಗನ್ನಡವು ಬದಲಾವಣೆ ಹೊಂದಿ ಎಂಟನೇ ಶತಮಾನದಲ್ಲಿ ಹಳಗನ್ನಡವಾಯಿತು. ಹಳಗನ್ನಡ

ದಲ್ಲಿ ನಮಗೆ ವಿಪುಲ ಸಾಹಿತ್ಯ ದೊರಕುತ್ತದೆ. ಕನ್ನಡದ ಮೊದಲ ಕೃತಿಯಾದ "ಕವಿರಾಜಮಾರ್ಗ"ವನ್ನು ಶ್ರೀವಿಜಯ ಎಂಬಾತ ರಾಷ್ಟ್ರಕೂಟ ಚಕ್ರವರ್ತಿ ಅಮೋಘವರ್ಷ ನೃಪತುಂಗನ ಆಸ್ಥಾನದಲ್ಲಿದ್ದು, ಅವನ ಸೂಚನೆಯಂತೆ ರಚನೆ ಮಾಡಿದ. ಅದರ ಕಾಲ ಕ್ರಿ.ಶ. ೮೫೦. ಆ ಹೊತ್ತಿಗೆ ಅನೇಕ ಸಾಹಿತ್ಯ ಕೃತಿಗಳು ಕನ್ನಡದಲ್ಲಿ ರಚನೆಯಾಗಿದ್ದರೂ ಅವು ಯಾವುವೂ ನಮಗೆ ಲಭ್ಯವಾಗಿಲ್ಲ.

೭. "ಕವಿರಾಜ ಮಾರ್ಗ" ಕಾವ್ಯ ಮೀಮಾಂಸೆಯ ವಿಷಯ ಹೇಳುವ ಕೃತಿ. ಒಂಭತ್ತನೇ ಶತಮಾನದ ಬಳಿಕ ನಮಗೆ ಕನ್ನಡ ಸಾಹಿತ್ಯ ದೊರಕಲು ಆರಂಭ. ಪಂಪ ಭಾಗತವನ್ನು ಬರೆದ ಪಂಪ, ಶಾಂತಿ ಪುರಾಣವನ್ನು ಬರೆದ ಪೊನ್ನ, ಗದಾಯುದ್ಧವನ್ನು ಬರೆದ ರನ್ನ ಇವರೆಲ್ಲ ಹತ್ತನೆಯ ಶತಮಾನದವರು. ಇವರನ್ನು ಕನ್ನಡ ಸಾಹಿತ್ಯದ ರತ್ನತ್ರಯ ರೆಂದು ಕರೆದಿದ್ದಾರೆ.

೮. ಹನ್ನೊಂದನೇ ಶತಮಾನದಲ್ಲಿ ಹಳಗನ್ನಡವು ನಡುಗನ್ನಡವಾಯಿತು. ನಡುಗನ್ನಡವು ಬಹುವಾಗಿ ಹೊಸಗನ್ನಡವನ್ನು ಹೋಲುತ್ತದೆ. ನಡುಗನ್ನಡದಲ್ಲಿ ಹನ್ನೆರಡನೇ ಶತಮಾನದಲ್ಲಿ ವಚನ ಸಾಹಿತ್ಯವು ಸೃಷ್ಟಿಯಾಯ್ತು. ಬಸವ, ಅಲ್ಲಮ, ಸಿದ್ಧರಾಮ, ಮಹಾದೇವಿಯಕ್ಕ ಈ ಕಾಲದವರು.

೯. ೧೭-೧೮ನೇ ಶತಮಾನದಿಂದ ಹೊಸಗನ್ನಡ ಯುಗ ಆರಂಭ.

೧೦. ಸಂಸ್ಕೃತ, ಪ್ರಾಕೃತ, ಮರಾಠಿ, ತೆಲುಗು, ತಮಿಳು, ಪೋರ್ಚುಗೀಸ್, ಹಿಂದೂಸ್ತಾನಿ, ಇಂಗ್ಲಿಸ್ ಇವೇ ಮೊದಲಾದ ಭಾಷೆಗಳಿಂದ ಕನ್ನಡವು ಯತೇಷ್ಟವಾಗಿ ಪದಗಳನ್ನು ಸ್ವೀಕರಿಸಿ ಬೆಳೆದಿದೆ; ಇನ್ನೂ ಬೆಳೆಯುತ್ತಲೇ ಇದೆ. ಪ್ರತಿಯೊಂದು ಭಾಷೆಯೂ ಬೆಳೆಯುವುದು ಹೀಗೆಯೇ.

*

# ಕನ್ನಡ ಮತ್ತು ಸಂವಹನತೆ

ಡಾ|| ಪಿ.ವಿ. ನಾರಾಯಣ

ಭಾಷೆಯಿರುವುದು ಭಾವನೆ, ವಿಚಾರ, ಆಲೋಚನೆ-ಇವುಗಳನ್ನು ತಿಳಿಯ ಪಡಿಸುವುದಕ್ಕಾಗಿ. ಆದರೆ ಅತ್ಯಂತ ಸೂಕ್ಷ್ಮವಾದ ಅನುಭವ - ವಿಚಾರಗಳನ್ನು ಹೇಳುವ ಶಕ್ತಿ ಭಾಷೆಯೊಂದಕ್ಕೆ ಹೇಗೆ ಪ್ರಾಪ್ತವಾಗುತ್ತದೆ ಎಂದುದನ್ನು ಬಹಳ ಜನ, ವಿದ್ಯಾವಂತರೆನ್ನಿಸಿಕೊಂಡವರು ಕೂಡ, ಅರ್ಥ ಮಾಡಿಕೊಂಡಂತೆ ಕಾಣು ವುದಿಲ್ಲ. ಅದಕ್ಕಾಗಿಯೇ ಹಲವರು "ಕನ್ನಡದಲ್ಲಿ ವಿಜ್ಞಾನವನ್ನು ಹೇಳಲು ಸಾಧ್ಯವಿಲ್ಲ" ಎಂಬಂತಹ ಮಾತುಗಳನ್ನಾಡುತ್ತಾರೆ. ಆದರೆ ಕನ್ನಡಕ್ಕೆ ಅಂತಹ ಶಕ್ತಿ ಹೇಗೆ ಬಂದೀತು ಎಂದು ಮಾತ್ರ ಅವರು ಆಲೋಚಿಸಹೊರಡುವುದಿಲ್ಲ.

ಕನ್ನಡ ಈಗ್ಗೆ ಸಾವಿರ ವರ್ಷಕ್ಕೂ ಹಿಂದಿನಿಂದ ಕಾವ್ಯವನ್ನು ಬರೆಯುವ ಮಾಧ್ಯಮವಾಗಿರುವುದು ಸ್ಪಷ್ಟವಾದ ದಾಖಲೆಗಳಿಂದ ಸಾಬೀತಾಗಿದೆ; ಅದರಲ್ಲಿ ಜಗತ್ತಿಗೇ ಕೊಡುಗೆಯಾಗಬಲ್ಲ ವಚನಗಳು, ಕೀರ್ತನೆಗಳಂತಹ ವಿಶಿಷ್ಟ ಪ್ರಕಾರಗಳಿವೆ. ಸಾಹಿತ್ಯವೆನ್ನುವುದು ಅಮೂರ್ತವೂ ಆಳವೂ ಸಾಂದ್ರವೂ ಆದ ಅನುಭವದ್ರವ್ಯಕ್ಕೆ ರೂಪುಕೊಡುವ ಒಂದು ಪ್ರಯತ್ನ. ಎಂದರೆ ಕನ್ನಡಕ್ಕೆ ಆಳವಾದ ಅನುಭವವನ್ನು ಸಂವಹಿಸುವ ಶಕ್ತಿಯಿದೆ ಎಂದಂತಾಯಿತು. ಹಾಗಾದರೆ ಹೆಚ್ಚಾಗಿ ಬುದ್ಧಿಗಮ್ಯವಾದ ವಿಜ್ಞಾನದಂತಹ ವಿಷಯವನ್ನು ಸಮರ್ಥವಾಗಿ ಹಿಡಿದಿಟ್ಟುಕೊಳ್ಳಬಲ್ಲ ಶಕ್ತಿಯಿಲ್ಲ ಎಂದು ವಾದಿಸುವುದು ಸರಿಯಾದೀತೇ? ಅಥವಾ ಒಂದೊಂದು ಭಾಷೆಗೆ ಯಾವುದೋ ಒಂದು ಬಗೆಯ ದ್ರವ್ಯವನ್ನು ಹಿಡಿದಿಡುವ ಶಕ್ತಿ ಮಾತ್ರ ಇರುವುದೆಂದು ವಾದಿಸಬಹುದೇ ? ಇದು ವಿಚಾರ ಮಾಡಬೇಕಾಗಿರುವ ಅಂಶ. ಕನ್ನಡಕ್ಕೆ ಅನುಭವವನ್ನು ಸಮರ್ಥವಾಗಿ ಹಿಡಿದಿಡಬಹುದಾದ ಶಕ್ತಿಯಾದರೂ ಹೇಗೆ ಬಂದಿತು ? ಆ ಶಕ್ತಿ ಒಮ್ಮೆಗೇ ಸ್ಫುರಿಸಿ ಬಂದಿದೆಯೇನು ? ಎಂಬ ರೀತಿಯ ಪ್ರಶ್ನೆಗಳೂ ಉದ್ಭವಿಸುತ್ತವೆ.

ಹಾಗೆ ನೋಡಿದರೆ, ಕನ್ನಡ ಸಾಹಿತ್ಯದ ಮೊದಮೊದಲಿನ ಬರಹದ ದಾಖಲೆಗಳನ್ನು ಪರಿಶೀಲಿಸಿದಾಗ ಕಂಡುಬರುವುದೆಂದರೆ, ಸರಳವಾದ ವಿಚಾರಗಳನ್ನು ಹೇಳಿರುವ ರೀತಿಯೇ ಕಾಣಸಿಗುವುದು. ಮುಂದೆ ಬರಬರುತ್ತ ಆ ಕಾಲದಲ್ಲಿ ಅತ್ಯಂತ ಸೂಕ್ಷ್ಮವೆಂದು ಭಾವಿಸಲಾಗಿದ್ದ, ವಿಚಾರಗಳನ್ನು ಕಣ್ಣಲ್ಲಿಟ್ಟುಕೊಂಡು ಕಾಪಾಡಬಲ್ಲ ಶಕ್ತಿ ಕನ್ನಡದಲ್ಲಿ ಹೆಚ್ಚಾಗುತ್ತ ನಡೆಯಿತು. ವಚನಗಳನ್ನು ಉದಾಹರಣಗಳಾಗಿ ತೆಗೆದುಕೊಳ್ಳಿ : ಆಧ್ಯಾತ್ಮಿಕವಾಗಿ ಅತ್ಯಂತ ಸೂಕ್ಷ್ಮವೆಂಬ ಅನುಭವವನ್ನೂ ಅವು ಹುದುಗಿಸಿಕೊಂಡಿಲ್ಲವೇ ? ಇದು ಬಂದಿದ್ದಾದರೂ ಹೇಗೆ ಎಂದು ನಾವು ಆಲೋಚಿಸಬೇಕಾಗಿದೆ. ನಾನಿಲ್ಲಿ ಸ್ಪಷ್ಟಪಡಿಸಬೇಕಾದುದಿಷ್ಟು :

ಭಾಷೆಗೆ ತನ್ನಲ್ಲಿ ತಾನೇ ಸಂವಹನಶಕ್ತಿ ಪ್ರಾಪ್ತವಾಗುವುದು ಸಾಧ್ಯವಿಲ್ಲ; ಎಷ್ಟಾಗಲೀ ಅದೊಂದು ಸಾಧನ; ಸಾಧನದ ಅಂತಶಕ್ತಿಗಿಂತ ಅದರ ಉಪಯುಕ್ತತೆಗೆ ಬೇಕಾದುದು ಅದನ್ನು ಬಳಸಬಲ್ಲ ಸಾಮರ್ಥ್ಯ.

ಅದನ್ನು ಉಪಯೋಗಿಸಬಲ್ಲವನ್ನು ತನ್ನ ಬುದ್ಧಿಶಕ್ತಿ, ಅನುಭವಶಕ್ತಿ, ವಿಚಾರಶಕ್ತಿಗಳಿಂದ ಅದನ್ನು ಬಳಸಿದಾಗ ಸಾಧಾರಣ ಮಾತು ಕಾವ್ಯವಾಗುತ್ತದೆ, ಶಾಸ್ತ್ರವಾಗುತ್ತದೆ, ಮಂತ್ರವಾಗುತ್ತದೆ. ಆದ್ದರಿಂದ ಕನ್ನಡಕ್ಕೆ ಸಂವಹನಶಕ್ತಿ ಬರುವುದು ಎಂದರೆ ಕನ್ನಡಿಗರು ತಮ್ಮ ಸಾಮರ್ಥ್ಯವನ್ನು ಅದರಲ್ಲಿ ಸುರಿಸುವುದು ಎಂದರ್ಥ. ಸಾಮರ್ಥ್ಯವಿರದವನಿಗೆ ಕನ್ನಡ ಭಾಷೆಗೇ ಸಾಮರ್ಥ್ಯವಿಲ್ಲ ಎನ್ನಿಸಿಬಿಡುತ್ತದೆ !

ಅಲ್ಲದೆ ಭಾಷೆಯು ಒಂದು ಸಾಮುದಾಯಿಕ ಮಾಧ್ಯಮ; ದೀರ್ಘಕಾಲದ ಪರಂಪರೆಯಿಂದಾಗಿ ಅದು ಲಕ್ಷಾವಧಿ ಜನರಲ್ಲಿ ವ್ಯವಹಾರದಲ್ಲಿರುತ್ತದೆ. ಅದರ ವಿವಿಧ ಸಂವಹನಾಂಶಗಳಿಗೂ ಈ ಪರಂಪರೆಯಿಂದಲೇ ಸೊಗಸು, ನಿರ್ದುಷ್ಟತೆ ಒದಗುವುದು. ದೀರ್ಘಕಾಲದಿಂದ ಕಾವ್ಯವನ್ನು ಹೇಳಲು ಕನ್ನಡವನ್ನು ಸಮರ್ಥರಾದವರು ಬಳಸಿದ್ದರಿಂದ ಅದರಲ್ಲಿ ಹೆಚ್ಚಿನ ಸುದ್ಧಿ ಅದಕ್ಕೆ ಸಾಧ್ಯವಾಯಿತು. ಮಿಕ್ಕ ವಿಚಾರಗಳನ್ನು ಹೇಳುವುದಕ್ಕಾಗಿ ಕನ್ನಡವನ್ನು ಬಳಸಿಕೊಳ್ಳಲಿಲ್ಲ; ಹಾಗಾಗಿ ಅದರಲ್ಲಿ ನಿರ್ದುಷ್ಟತೆ ಕಾಣಿಸುದಿಲ್ಲ. ಬಳಸುತ್ತ ಹೋದಂತೆ ಭಾಷೆಯು ಪೆಡಸುತನ ಹೋಗಿ ಅದು ಮೃದುವಾಗುತ್ತದೆ, ವಿವಿಧ ಛಾಯೆಗಳನ್ನು ಹರಿಸುವ ಶಕ್ತಿ ಅದಕ್ಕೆ ಪ್ರಾಪ್ತವಾಗುತ್ತದೆ. ಹೀಗಾಗಿ ಕನ್ನಡಕ್ಕೆ ಸಾಮರ್ಥ್ಯ ಬರಬೇಕಾದರೆ ಅದನ್ನು ಬಳಸುತ್ತ ಹೋಗಬೇಕಾದುದೇ ಸರಿಯಾದ ಮಾರ್ಗ. ವಿಜ್ಞಾನದ ನಿರ್ದುಷ್ಟತೆ ಕನ್ನಡದಲ್ಲಿ ಸಾಧ್ಯವಿಲ್ಲ, ಅದು ಬಂದ ಮೇಲೆ ವಿಜ್ಞಾನವನ್ನು ಕನ್ನಡದಲ್ಲಿ ಹೇಳುವುದಕ್ಕಾಗದು ಎಂದು ಕೆಲವರು ವಾದಿಸುತ್ತಾರೆ. ಈ ವಾದ ಈಜು ಬರುವವರೆಗೂ ನೀರಿನಲ್ಲಿ ಇಳಿಯುವುದಿಲ್ಲ ಎಂಬುದರಷ್ಟೇ ಅಸಂಬದ್ಧ ಪ್ರಲಾಪ.

ಭಾಷೆಯನ್ನು ಉಪಯೋಗಿಸುವ ವಿಚಾರದಲ್ಲಿಯೂ ಹೀಗೆಯೇ. ಬಳಕೆಯಿಂದಲೇ ಭಾಷೆಯ ಸಾಮರ್ಥ್ಯ ಗಟ್ಟಿಗೊಳ್ಳುವುದು, ಸ್ಥಿರವಾಗುವುದು.

ಮತ್ತೊಂದು ವಿಷಯವೇನೆಂದರೆ : ಭಾಷೆಯು ಹೊಸದನ್ನು ಅರಗಿಸಿಕೊಳ್ಳುತ್ತ ಹೋದಾಗಲೇ ಅದರ ಸಾಮರ್ಥ್ಯವು ಬೆಳೆಯಲು ಸಾಧ್ಯ. ಎಷ್ಟೇ ಆಗಲಿ, ಭಾಷೆಯು ಮನುಷ್ಯನ ಜೀವನಕ್ಕೆ ನೇರವಾಗಿ ಸಂಬಂಧಿಸಿರುವ ಸಾಧನ; ಆದ್ದರಿಂದ ಅದರ ಸಂವಹನ ಶಕ್ತಿ ಆ ಭಾಷೆಯಾಡುವ ಜನರ ಜೀವನಕ್ಕೆ ನೇರವಾಗಿ ಸಮಾನಾಂತರವಾಗಿರುತ್ತದೆ. ಆಧ್ಯಾತ್ಮಿಕ ವಿಷಯವನ್ನೋ ಸಂಗೀತ ಶಾಸ್ತ್ರವನ್ನೋ ಕನ್ನಡದಲ್ಲಿ ಸುಲಲಿತವಾಗಿ ಹೇಳಲು ಸಾಧ್ಯವಾ

ದಷ್ಟು ವಿಜ್ಞಾನ ತಂತ್ರಜ್ಞಾನಗಳನ್ನು ಹೇಳಲು ಸಾಧ್ಯವಿಲ್ಲ ಎಂದು ಹಲವರು ಹೇಳುತ್ತಾರೆ. ಅದಕ್ಕೆ ಕಾರಣವೇನಿರಬಹುದು ? ಕನ್ನಡ ಭಾಷೆಯನ್ನಾಡುವ ಜನ ಹಿಂದಿನಿಂದಲೂ ಆಧ್ಯಾತ್ಮಿಕ ಆಲೋಚನೆಯಲ್ಲಿ. ಸಂಗೀತ ವಿಚಾರದಲ್ಲಿ ತೊಡಗಿ ಆಯಾ ಕ್ಷೇತ್ರಗಳಲ್ಲಿ ತವುಗನ್ನಿಸಿದ್ದನ್ನು ತಮ್ಮ ಭಾಷೆಯಲ್ಲಿ ಹೇಳಿದರು. ಆದರೆ ನಾವು ಈಚೆಗೆ ಗುರುತಿಸುತ್ತಿರುವ ವಿಜ್ಞಾನ ಪಾಶ್ಚಾತ್ಯಪ್ರಭಾವದಿಂದ ನಮ್ಮ ಜೀವನದಲ್ಲಿ ಹೊಕ್ಕಿರುವಂಥದು. ಆದಕ್ಕೇ ಆ ವಿಷಯದ ಸೂಕ್ಷ್ಮಾಭಿವ್ಯಕ್ತಿ ನವುಗೆ ಸಾಧ್ಯವಿಲ್ಲವೇನೋ ! ವ್ಯವಸಾಯಕ್ಕೆ ಸಂಬಂಧಪಟ್ಟಂತೆ ಅತ್ಯಂತ ಸೂಕ್ಷ್ಮ ವಿಷಯಗಳನ್ನೂ ನಮ್ಮ ರೈತಾಪಿ ಜನರು ಹೇಳಬಲ್ಲವರಾಗಿದ್ದಾರೆ. ಆದರೆ ಕೃಷಿವಿಜ್ಞಾನವನ್ನು ತಿಳಿಸಲು ನಮ್ಮ ವಿಜ್ಞಾನಿಗಳಿಗೆ ಯಾಕೆ ಸಾಧ್ಯವಾಗುವುದಿಲ್ಲ ? ಇಲ್ಲಿ ಇಡೀ ಭಾರತದ ಜನಜೀವನದಲ್ಲಿರುವ ವಿವಿಧತೆ ಕಾಣುತ್ತದೆ. ನಮ್ಮ ಸ್ವಂತಿಕೆಗೂ ನಮ್ಮ ಕಲಿಕೆಗೂ ಭಾರಿ ಅಂತರವಿದೆ. ಬೇಸಾಯಗಾರ, ನೇರವಾಗಿಯೇ ಮಾಡುವವನು ಬಳಸುವ ಭಾಷೆಗೂ; ವಿದೇಶೀ ಪದ್ಧತಿಯಲ್ಲಿ ಆ ಶಾಸ್ತ್ರವನ್ನು ಅಭ್ಯಾಸ ಮಾಡುವವನು ಕಲಿತ ಭಾಷೆಗೂ ವ್ಯತ್ಯಾಸವಿದೆ. ಒಂದು ತಾನು ಮಾಡಿದ್ದಕ್ಕೆ ಮಾತಿನ ರೂಪು ಕೊಡುವ ರೀತಿ; ಮತ್ತೊಂದು ಯಾರೋ ಮಾಡುವುದನ್ನು ಇನ್ನಾರದೋ ಮಾತಿನಲ್ಲಿ ಹೇಳುವ ವಿಧಾನ. ಹೀಗಾಗಿ ಈ ಬಗೆಯ ದ್ವಂದ್ವ, ಕೃತ್ರಿಮತೆ ಕಾಣುತ್ತದೆ.

ನಾನು ಹೇಳಬಯಸುತ್ತಿರುವುದಿಷ್ಟು: ವಿಜ್ಞಾನ ನಮ್ಮ ಜೀವನದ ಒಂದು ಸಹಜ ಭಾಗವಾದಾಗ ನಮ್ಮ ಭಾಷೆ ಅದನ್ನು ಹಿಡಿದಿಟ್ಟುಕೊಳ್ಳುವ ಸಾಮರ್ಥ್ಯವನ್ನು ಪಡೆಯುತ್ತದೆ. ಗಿಳಿ ಪಾಠದಿಂದ ಭಾಷೆ ಬೆಳೆಯಲಾರದು. ಜೊತೆಗೆ ಆರೋಗ್ಯವಾಗಿ ಬೆಳೆಯಬೇಕಾದ ದೇಹಕ್ಕೆ ಆಹಾರವನ್ನು ತಿಂದು ಅದರಲ್ಲಿನ ಶಕ್ತಿಯನ್ನು ತನ್ನ ಶಕ್ತಿಯ ಭಾಗವಾಗಿಸಿಕೊಳ್ಳುವ ಮಾಂತ್ರಿಕತೆಯಿರುತ್ತದೆ. ಹಾಗೆಯೇ ಆರೋಗ್ಯಕರ ಬುದ್ಧಿಗೆ ತನ್ನ ಆಲೋಚನೆಯನ್ನು 'ತನ್ನ' ಭಾಷೆಯಲ್ಲಿಯೇ ಹೊರಸೂಸುವ ಸಾಮರ್ಥ್ಯವಿರುತ್ತದೆ. ಈ ಸ್ವಂತಿಕೆ ಬೆಳೆದಷ್ಟೂ ಭಾಷೆ ಬೆಳೆಯುತ್ತದೆ. ಇದು ಕನ್ನಡ ಶಬ್ದವಲ್ಲ. ಇಂಗ್ಲಿಷಿನದು. ಸಂಸ್ಕೃತದ್ದು ಇತ್ಯಾದಿ ಮಾತುಗಳು ಅಲ್ಪಜ್ಞಾನಿಗಳಿಂದ ಬರುವ ಮಾತುಗಳು. ಕನ್ನಡದ ಮೂಲದ್ರವ್ಯ ಸ್ವಂತವಾದದ್ದು ಎಂದೆಂದೂ ಉಳಿದು ಅದರ ಸುತ್ತ ನಮ್ಮ ಜನರ ಸಾಮರ್ಥ್ಯಕ್ಕೆ ಅನುಗುಣವಾದ ಶಬ್ದಪ್ರಭಾವಳಿ ಬೆಳೆಯುತ್ತಾ ಹೋಗುತ್ತದೆ. ಕನ್ನಡಿಗನೊಬ್ಬ 'ಸಹಜ'ವಾಗಿ ಬಳಸುವುದೇ ಕನ್ನಡ; ಅಲ್ಲೂ ಸಂದ ಶಬ್ದಗಳೂ ಇಲ್ಲೂ ಸಂದಿವೆ, ಅಷ್ಟೆ. ಮಡಿ ಭಾಷೆಯು ಬೆಳವಣಿಗೆಗೆ ಮಾರಕ. ಎಲ್ಲ ಕಡೆಯಿಂದ ಗಾಳಿ ಬೆಳಕು ಬರಲಿ. ನಮ್ಮ ಮನೆಯು ಬೆಳೆಯುತ್ತದೆ.

*

# ಕನ್ನಡನಾಡು ಮತ್ತು ಕನ್ನಡಭಾಷೆ

ಪ್ರೊ|| ಕ.ಸಂ. ರಾಜಗೋಪಾಲ

ನಮ್ಮ ಭಾರತಕ್ಕೆ ಸ್ವಾತಂತ್ರ್ಯ ಬರುವುದಕ್ಕೆ ಮುಂಚೆಯೇ ಗಾಂಧೀಜಿ ಮೊದಲಾಗಿ ಸ್ವಾತಂತ್ರ್ಯಾನಂತರ ಭಾಷಾವಾರು ಪ್ರಾಂತೀಕರಣದ ಬಗ್ಗೆ ಒಂದು ವಿವಾದ ರಹಿತವಾದ ತೀರ್ಮಾನಕ್ಕೆ ಬಂದಿದ್ದ ನಾವು, ಅಂದರೆ ನಮ್ಮ ಮುಂದಾಳುಗಳು, ಇಂತಹ ಒಪ್ಪಂದಕ್ಕೆ ಎಂದೂ ವಿರೋಧಿಸಿದವರಲ್ಲ.

ಸ್ವಾತಂತ್ರ್ಯ ಬಂದು 'ಭಾಷಾವಾರು' ನೆರಳಿನಲ್ಲಿಯೇ ಪ್ರಾಂತೀಕರಣವೂ ಆಯ್ತು. ಇದನ್ನೆಲ್ಲಾ ಆಳ್ವಿಕೆಯ ಅನುಕೂಲಕ್ಕಾಗಿ ಮಾಡಲಾಯಿತು. ಆದರೆ 'ಭಾಷಾವಾರು' ಕ್ರಮೇಣ ಸರಿಹೋಗುತ್ತದೆಯೆಂದು ಅಂದುಕೊಂಡ ಹಾಗೆ ಕಾಣುತ್ತದೆ. ವಾಸ್ತವವಾಗಿ ಇದ್ದಕ್ಕಿದ್ದಂತೆ ಹುಟ್ಟಿದ ವಿಭಜನೆ, ಕೋಮುವಾರು ಗಲಭೆಗಳು ಮತ್ತು ಪ್ರಾಂತೀಕರಣ ಸಮಸ್ಯೆಗಳು ಇತ್ಯಾದಿಗಳಿಂದ ಭಾಷೆಯ ಸಮಸ್ಯೆಗಳು ಹಿಂದೆ ಬಿದ್ದವು. ನಮ್ಮ ರಾಜಕಾರಣಿಗಳೂ ಒಗ್ಗಟ್ಟನ್ನು ಮರೆತಂತೆ ಪ್ರಾಂತೀಯ ಎಲ್ಲೆ ಕಟ್ಟುಗಳನ್ನು ಪರಸ್ಪರ ಹೊಂದಿಸಿಕೊಂಡು ಶಾಂತಿಯುತ ಹಾದಿಯನ್ನು ಹಿಡಿಯುವುದನ್ನು ಬಿಟ್ಟು ರಾಜಕೀಯ ಪಕ್ಷಗಳ ಘರ್ಷಣೆಗೆ ಅವಕಾಶವುಂಟಾಯಿತು. ವಾಸ್ತವವಾಗಿ ಭಾಷೆ ಮತ್ತು ಜನರ ವಿಚಾರವು ಮೊದಲ ಆದ್ಯತೆಯನ್ನ ಪಡೆದಿದ್ದರೆ ಭಾಷೆಗಾಗಿ ಘರ್ಷಣೆಯನ್ನು ತಪ್ಪಿಸಲು ಸಾಧ್ಯವಾಗುತ್ತಿತ್ತು.

ಈಗ ಈ ಹಿನ್ನೆಲೆಯನ್ನು ಸರಿಯಾಗಿ ಪರಿಶೀಲಿಸಬೇಕಾದ ಅಗತ್ಯವಿದೆ. ಭಾಷಾವಾರು ಪ್ರಾಂತೀಕರಣವು ಇಡೀ ಭಾರತದಲ್ಲಿ ಎಲ್ಲರಿಗೂ ಒಪ್ಪಿಗೆಯಾಗುವಂತೆ ಸಾಧ್ಯವಾಗಲಿಲ್ಲ. ಇದರ ಫಲವಾಗಿ ಒಂದೊಂದು (ಅದರದರ ಭಾಷೆ) ಭಾಷೆಯು ವ್ಯವಹಾರದ ಭಾಷೆಯಾಗಲಿಲ್ಲ. ಅದಕ್ಕಾಗಿ ಭಾಷಾವಾರು ಅಲ್ಪಸಂಖ್ಯಾತರು ಪ್ರತಿಯೊಂದು ಪ್ರಾಂತದಲ್ಲಿಯೂ ಡೆಮೋಕ್ರಸಿಯ ಹೆಸರಿನಲ್ಲಿ ಗೊಂದಲವನ್ನುಂಟು ಮಾಡಲು ಅವಕಾಶವಾಗಿದೆ.

ಇವಕ್ಕೆಲ್ಲಾ ಹಿಂದೆಂದೂ ಇರದಿದ್ದ ಮಾತೃಭಾಷಾ ವ್ಯಾಮೋಹವನ್ನು ಮುಂದು ಮಾಡಿಕೊಂಡು ಆಗಿರುವ ರಾಜಕೀಯ ಪ್ರಾಂತೀಕರಣಕ್ಕೂ ಧಕ್ಕೆಯನ್ನುಂಟುಮಾಡಲು ಹಿಂಜರಿಯುತ್ತಿಲ್ಲ. ಅಲ್ಲದೆ ರಾಜಕೀಯವಾಗಿ ಒಂದೊಂದು ಪ್ರಾಂತವೂ ಕೆಲವು ಅಧಿಕಾರಗಳನ್ನೂ ಪಡೆಯುತ್ತಿರುವುದರಿಂದ ಭಾಷಾ ವ್ಯಾಮೋದ ಜೊತೆಗೆ ದೇಶಭಾಗದ ವ್ಯಾಮೋಹವನ್ನು ಬೆಳೆಸಿಕೊಂಡು 'ಮಾತೃಭಾಷೆ'ಯೆಂಬ ವಾದವನ್ನು ಮುಂದೆ ಮಾಡಿ ಪರಸ್ಪರ ವಿರೋಧಾಭಾಸಗಳಲ್ಲಿ ತೊಡಗುವಂತೆ ಆಗಿದೆ. ಇದನ್ನೆಲ್ಲಾ ಅಲ್ಪ ಸಂಖ್ಯಾತರಿಗೆ ಸಂರಕ್ಷಣೆಯೆನ್ನುವ ತಲೆ ಬರಹದಲ್ಲಿ

ನಡೆಸಲಾಗುತ್ತಿದೆ.

ವಾಸ್ತವವಾಗಿ ಭಾಷಾ ಗೊಂದಲ ಹಿಂದೆ ಈದೇಶದಲ್ಲಿ ಅನೇಕ ನಗರಗಳು ತಾಲ್ಲೂಕು ಭಾಗಗಳು ಎರಡು ಮೂರು ಭಾಷೆಗಳನ್ನು ವಿದ್ಯಾಭ್ಯಾಸವೇ ಇಲ್ಲದವರೂ ಬಳಸುತ್ತಿದ್ದ ಅಭ್ಯಾಸವಿದ್ದಿತು. ಅವರಿಗೆ ಅದರಿಂದ ಆತಂಕವಿರಲಿಲ್ಲ. ಆದರೆ ಭಾಷಾ ಸಮಸ್ಯೆಯನ್ನು ಅಸಗತ್ಯ ರೀತಿಯಲ್ಲಿ ಬೆಳೆಸಿರುವುದಾಗಿ ರಾಜಕೀಯ ಪಕ್ಷಗಳೂ ಗೊಂದಲಕ್ಕೆ ಬೀಳುತ್ತಿವೆ. ಭಾಷೆಯ ಹೆಸರಿನಲ್ಲಿ ಒಂದೊಂದು ರಾಜಕೀಯ ಪಕ್ಷವೇ ಹುಟ್ಟುವಂತೆ ಆಗಿದೆ. ರಾಜಕೀಯದಲ್ಲಿ ಬರಿಯ ಭಾಷೆಯೇ ಮುಖ್ಯ ಗುರಿಯುಳ್ಳ ಪಕ್ಷವು ನ್ಯಾಯವಾದ ಮಾನವೀಯ ಹಕ್ಕುಭಾದ್ಯತೆಗಳನ್ನು ಕಡೆಗಣಿಸಬೇಕಾಗುತ್ತದೆ.

ಇಂತಹ ಸ್ಥಿತಿಯನ್ನು ನಮ್ಮ ರಾಜಕೀಯ ತಜ್ಞರು ಮೊದಲಾಗಿ ಮಾಡಿರುತ್ತಾರೆ. ಉದಾ: ಒಂದು ಪಕ್ಷವು ಆಳುತ್ತಿರುವಾಗ ಮತ್ತೊಂದು ವಿರೋಧ ಪಕ್ಷವು ಕನ್ನಡ ಭಾಷೆಗೆ ಆದ್ಯತೆ ಆಡಳಿತವನ್ನು ಒತ್ತಾಯಪಡಿಸುತ್ತಿದ್ದು ಅದೇ ಪಕ್ಷವು ಆಡಳಿತಕ್ಕೆ ಬಂದಾಗ ಮೊದಲಿನ ಪಕ್ಷವು ಭಾಷೆಯ ಆದ್ಯತೆಗೆ ಬೆಂಬಲ ನೀಡುವಂತೆ ಅದಲುಬದಲಿನ ಆಟ ಜರುಗುತ್ತಿದೆ.

ವಾಸ್ತವವಾಗಿ ಭಾಷಾವಾರು ಪ್ರಾಂತೀಕರಣವು ಯಶಸ್ವಿಯಾಗಬೇಕಾದರೆ ವ್ಯವಹಾರಕ್ಕೆ ಅಲ್ಲಲ್ಲಿಯ ಜನತೆಯ ಭಾಷೆಗೆ ಆದ್ಯತೆ ಬರಬೇಕು, ಅದರ ಬದಲು ಮಾತೃ ಭಾಷೆಯ ನೆಪ ಹೂಡಿಕೊಂಡರೆ ನಮ್ಮ ದೇಶದ ಯಾವುದೇ ಪ್ರಾಂತವೂ ತನ್ನ ಭಾಷೆಯನ್ನು ಮಾತ್ರ ವ್ಯವಹಾರಕ್ಕೆ ಬಳಸಲು ತಾತ್ವಿಕವಾಗಿ ಸಾಧ್ಯವಾಗುವುದಿಲ್ಲ.

ಕನ್ನಡ ನಾಡಿನಲ್ಲಿ ಕನ್ನಡವನ್ನು ವ್ಯವಹಾರದ ಭಾಷೆಯನ್ನಾಗಿ ಮಾಡಲು ಯಾವುದೇ ರಾಜಕೀಯ ಪಕ್ಷವಾದರೂ ಮೊದಲು ಸಿದ್ಧವಿರಬೇಕು. ಅಲ್ಪಸಂಖ್ಯಾತರಿಗೆ ಮಾತೃಭಾಷೆಯನ್ನು ವ್ಯವಹಾರಕ್ಕೆ ಬಳಸಬೇಕೆಂದು ಹೇಳುವುದಾದರೆ ಅದು ರಾಜಕೀಯ ಅಪಕ್ವತೆಯನ್ನು ತೋರಿಸುತ್ತದೆ. ಬೇರೆ ಭಾಷೆಗಳ ಸಂರಕ್ಷಣೆಯನ್ನು ಮಾಡಲು ಬೇರೆಯ ಅನುಕೂಲಗಳಿವೆ. ಕನ್ನಡ ನಾಡಿನಲ್ಲಿ ಉಳಿದ ಭಷೆಗಳಿಗೆಲ್ಲಾ ವ್ಯವಹಾರದ ಸ್ಥಾನಮಾನ ದೊರಕಬೇಕೆಂದು ಹೇಳುವವರೆಲ್ಲಾ ರಾಜಕೀಯ ಗೊಂದಲಿಗರೇ ಹೊರತು ಸರಿಯಾಗಿ ವಿಚಾರ ಮಾಡುವಂಥವರಲ್ಲ.

ಈ ಮಾತೃಭಾಷೆಯ ಸಿದ್ಧಾಂತವನ್ನು ಮುಂದೆಮಾಡುತ್ತಿರವವರು ಕೆಲವು ರಾಜಕೀಯ ಪಕ್ಷಗಳೇ ಮಾಡುತ್ತಿರುವುದಂತೂ ಸ್ವಾರಸ್ಯದ ವಿಷಯವಾಗಿದೆ. ಈ ನಾಡಿನಲ್ಲಿ ನೂರಕ್ಕೆ ೮೦ ಪಾಲಾದರೂ ಕನ್ನಡವನ್ನು ಬಳಸುತ್ತಿರುವ ಕಡೆ ಗೊಂದಲವನ್ನು ಎಬ್ಬಿಸುತ್ತಿರುವ ರಾಜಕೀಯ ಮುದಾಳುಗಳು ಸರಿಯಾಗಿ ವಿಚಾರಮಾಡುತ್ತಿಲ್ಲ. ನಮ್ಮ ಚುನಾವಣೆಗಳನ್ನು ಅನೀತಿಯ ಗೊಳಿಸಲು ಜಾತೀಯತೆಯ ಜೊತೆಗೆ ಮಾತ್ರ ಭಾಷಾ

ವಾದವೂ ಸೇರಿರುವುದನ್ನು ತಿಳಿದೂ ತಿಳಿದೂ ರಾಜಕೀಯವನ್ನು ಬೆಳೆಸುತ್ತಿದ್ದೇವೆ. ಅಷ್ಟೇ ಅಲ್ಲದೆ ಪರಿಹಾರವನ್ನು ಜಾರಿಗೆ ತರುವುದಕ್ಕೂ ಈ ಮುಂದಾಳುಗಳು ಅಡ್ಡಿಯಾಗುತ್ತಿದ್ದಾರೆ.

ನಮ್ಮ ಜನ ತಮ್ಮ ಮುಂದಾಳುಗಳನ್ನು ಆರಿಸುವಲ್ಲಿ ಪಡೆಯುವ ಭರವಸೆಯ ಪಟ್ಟಿಯಲ್ಲಿ ಕನ್ನಡವನ್ನು ವ್ಯವಹಾರದ ಭಾಷೆಯನ್ನಾಗಿ ಮಾಡುವುದು-ಸೇರಿಕೊಳ್ಳುತ್ತಿದೆ. ಆದರೆ ಚುನಾಯಿತರಾದ ಮೇಲೆ ಅದು ಅಸಾಧ್ಯವೆನ್ನುವವರೇ ಕಂಡುಬರುತ್ತಿದ್ದಾರೆ. ಹೀಗೆ ಕನ್ನಡ ಜನತೆಯು ಮೋಸಹೋಗುತ್ತಿದೆ.

ಕನ್ನಡ ನಾಡಿನಲ್ಲಿ ಜಾತ್ಯಾತೀತವಾದ ಮತ್ತು ಸುಮಾರು ೮೦ ಪಾಲು ಬಳಸುವ ಭಾಷೆಗೆ ವ್ಯವಹಾರದ ಯೋಗ್ಯತೆ ಉಳಿದ ಭಾಷೆಗಳಿಗಿಂತ ಹೆಚ್ಚಾಗಿರುವಲ್ಲಿ ಅದಕ್ಕೆ ಆಧ್ಯತೆಯನ್ನು ಕೊಡದೇ ಹೋದಾಗ ತಪ್ಪಾಗುತ್ತದೆ. ಅಲ್ಲದೆ ಉಳಿದ ಯಾವುದೇ ಭಾಷೆಗೆ ಇಂತಹ ಅವಕಾಶವನ್ನು ಕೊಡಬೇಕೆಂದು ಹೇಳುವವರಿಗೆ ವ್ಯವಹಾರ ಜ್ಞಾನವೇ ಇರುವುದಿಲ್ಲ ಎನ್ನಬೇಕಾಗುತ್ತದೆ. ಏಕೆಂದರೆ ಹಲವು ಭಾಷೆಗಳನ್ನು ವ್ಯವಹಾರಕ್ಕೆ ಒಪ್ಪಿಕೊಳ್ಳುವುದಾದರೆ ಇಡೀ ರಾಜ್ಯದ ಜನತೆಯನ್ನು ಅವೆಲ್ಲಾ ಭಾಷೆಗಳನ್ನು ಬಲವಂತವಾಗಿ ಕಲಿಯಬೇಕೆನ್ನುವ ನೀಚ ಮತ್ತು ದಬ್ಬಾಳಿಕೆಯ ಹಂತವನ್ನು ಮುಟ್ಟಬೇಕಾಗುತ್ತದೆ.

ನಮ್ಮ ಎಲ್ಲ ಸಂಖ್ಯಾತರು ಎಂದರೆ ಇಲ್ಲಿಯೇ ಹೊಲಮನೆ ಮಾಡಿ ತಲೆತಲಾಂತರದಿಂದ ಬದುಕಿರುವವರು ಮಾತ್ರ ಆಗುತ್ತಾರೆ. ಅಂಥವರು ತಮ್ಮ ಮನೆಯ ಮಾತಿನ ಜೊತೆಗೆ ಊರಿನ ವ್ಯವಹಾರದ ಭಾಷೆ (ಕನ್ನಡ) ವನ್ನು ಕಲಿಯುತ್ತಾ ಬಂದಿದ್ದಾರೆ. ಹೀಗೆ ಅನುಕೂಲವಾದ ಜನತೆಗೆ ಈಗ ರಾಜಕೀಯವು ಗೊಂದಲವನ್ನು ಹುಟ್ಟು ಹಾಕುತ್ತಿದೆಯೆನ್ನಿಸುತ್ತದೆ. ಉದಾ: ಪಂಜೆ ಮಂಗೇಶರಾಯರು ಕನ್ನಡದ ಪ್ರಸಿದ್ಧ ಸಾಹಿತಿಗಳು. ಅವರ ಮನೆ ಮಾತು ಕೊಂಕಣಿ. ಅಂದ ಮೇಲೆ ವ್ಯವಹಾರದ ಭಾಷೆಯಾದ ಕನ್ನಡವು ಅವರಿಗೆ ಎಂತಹ ಗೌರವವನ್ನು ತಂದುಕೊಟ್ಟಿತು ? ಅದೂ ಸಂಕುಚಿತ ಅಥವಾ ಸೀಮಿತವಾದ ಓದುಗ ಜನತೆಯನ್ನು ಮೀರಿ ಎಲ್ಲಾ ಕನ್ನಡಿಗರಿಗೂ ಬೇಕಾದ ಸಾಹಿತ್ಯ ನಿರ್ಮಾಣವೂ ಆಗಿ ಕವಿಗೆ ಹೆಚ್ಚು ಮನ್ನಣೆಯೂ ದೊರಕಿದೆ. ಆಗಿನ ಕಾಲವಲ್ಲಿ ಮಾತೃಭಾಷಾ ಸಿದ್ಧಾಂತವು ಪ್ರಬಲವಾಗಿ ಈಗಿನಂತಿದ್ದರೆ ಅವರು ಕನ್ನಡ ನಾಡಿನ ಕವಿಯಾಗುತ್ತಿರಲಿಲ್ಲ. ಅವರ ಪ್ರತಿಭೆಗೆ ವ್ಯವಹಾರದ ಭಾಷೆಯೂ ಅನುಕೂಲವಾಗಿ ಇಡೀ ಕನ್ನಡ ನಾಡಿನ ಹೆಮ್ಮೆಯಾಯಿತು ಎಂಬುದನ್ನು ನೆನೆದರೆ, ಅಪಕ್ವವಾದ ಸಿದ್ಧಾಂತದ ಆಧಾರದಿಂದ ವ್ಯವಹಾರದ ಸಾಧ್ಯತೆಗಳನ್ನು ಕೆಡಿಸಿಕೊಳ್ಳುತ್ತಿದ್ದೇವೆ-ಎನ್ನಿಸುತ್ತಿದೆ.

ನಮ್ಮ ವ್ಯವಹಾರಕ್ಕೆ ತಕ್ಕ ಯೋಗ್ಯತೆಯು ಕನ್ನಡ ಭಾಷೆಗಿದೆ. ಬೇರೆಯ ಭಾಷೆಗಳಿಗೆ ಕೇವಲ ಎರಡು ಮೂರು

(19ನೇ ಪುಟಕ್ಕೆ)

## ಕಾಳಿದಾಸ ಮಹಾಕವಿಯ ಸಾಹಿತ್ಯ ಕೃತಿಗಳು

1. ಮೇಘದೂತ
2. ಋತುಸಂಹಾರ
3. ರಘುವಂಶ
4. ಮಾಲವಿಕಾಗ್ನಿ ಮಿತ್ರ ನಾಟಕ
5. ವಿಕ್ರಮೋರ್ವಶೀಯ
6. ಅಭಿಜ್ಞಾನ ಶಾಕುಂತಲ

೦ ೦ ೦ ೦ ೦ ೦ ೦ ೦ ೦

## ವಿಲಿಯಂ ಷೇಕ್ಸ್‌ಪಿಯರ್‌ನ ಸಮಗ್ರ ಕಾವ್ಯ

**ವಿಡಂಬನೆ–**

ಕಾಮೆಡಿ ಆಫ್ ಎರರ್ಸ್, ಟೇಮಿಂಗ್ ಆಫ್ ದಿ ಶ್ರೂ. ಟು ಜೆಂಟಲ್‌ಮನ್ ಆಫ್ ವೆರೋನಾ, ಲವ್ಸ್ ಲೇಬರ್ಸ್ ಲಾಸ್ಟ್, ಮಿಡ್ ಸಮ್ಮರ್-ನೈಟ್ಸ್ ಡ್ರೀಮ್, ಮರ್ಚೆಂಟ್ ಆಫ್ ವೆನಿಸ್, ಮೆರ್ರಿ ವೈವ್ಸ್ ಆಫ್ ವಿಂಡ್‌ಸರ್, ಮಚ್ ಆ್ಯಡೋ ಎಬೋಟ್ ನಥಿಂಗ್, ಆ್ಯಸ್ ಯು ಲೈಕ್ ಇಟ್, ಟ್ವೆಲ್ತ್ ನೈಟ್, ಟ್ರೋಯಿಲಸ್ ಅಂಡ್ ಕ್ರೆಸ್ಸಿಡ, ಮೆಶರ್ ಫಾರ್ ಮೆಶರ್, ಆಲ್ಸ್ ವೆಲ್, ಪೆರಿಕಲ್ಸ್, ಸಿಂಬೆಲಿನ್, ವಿಂಟರ್ಸ್ ಟೇಲ್, ಟೆಂಪೆಸ್ಟ್.

**ಐತಿಹಾಸಿಕ–**

೧-೨-೩ ಹೆನ್ರಿ 6, ರಿಚಾರ್ಡ್ 3, ಕಿಂಗ್ ಜಾನ್, ವೀನಸ್ ಅಂಡ್ ಅಂಡೋನಿಸ್, ರೇಪ್ ಆಫ್ ಲುಕ್ರೆಸಿ, ರಿಚಾರ್ಡ್ 2, ೧ ಹೆನ್ರಿ 4, ೨ ಹೆನ್ರಿ 4, ಹೆನ್ರಿ 5, ಹೆನ್ರಿ 8.

**ದುರಂತ–**

ಟಿಟೂಸ್ ಆ್ಯಂಡ್ರೋನಿಕುಸ್, ರೋಮಿಯೋ ಅಂಡ್ ಜ್ಯೂಲಿಯಟ್, ಜ್ಯೂಲಿಯಸ್ ಸೀಜರ್, ಹ್ಯಾಮ್ಲೆಟ್, ಒಥೆಲೋ, ಟೈಮೊನ್ ಆಫ್ ಅಥೆನ್ಸ್, ಲಿಯರ್ ದಿ ಕಿಂಗ್, ಮ್ಯಾಕ್‌ಬೆತ್, ಆ್ಯಂಟೋನಿ ಅಂಡ್ ಕ್ಲಿಯೋಪಾತ್ರ, ಕೋರಿಯೋಲಾನಸ್.

—ಸಂ.

# ಕನ್ನಡದ ಶ್ರೇಷ್ಠ ವಿದ್ವಾಂಸ
## ಡಾ॥ ಶಂ.ಬಾ. ಜೋಶಿ

ಅದೆಷ್ಟೋ ಭಾರತೀಯ ವಿದ್ವಾಂಸರು ತಮ್ಮ ಇಡೀ ಜೀವನವನ್ನೇ ಮುಡುಪಾಗಿಟ್ಟು, ಸತ್ಯಾನ್ವೇಷಣೆಯಲ್ಲಿ ತೊಡಗಿ ನಾಡಿಗೆ-ನುಡಿಗೆ ಅಪಾರ ಬೆಲೆ ಬಾಳುವ ಕೊಡುಗೆಯನ್ನು ನೀಡಿದ್ದಾರೆ. ಇಂಥ ಸಾಲಿಗೆ ಸಮರ್ಥರಾದ ಹಾಗೂ ಶ್ರೇಷ್ಠರಾದ ಕೆಲವೇ ಕನ್ನಡ ವಿದ್ವಾಂಸರಲ್ಲಿ ಡಾ॥ ಶಂಕರ ಬಾಳದೀಕ್ಷಿತ ಜ್ಯೋಶಿಯವರೂ ಒಬ್ಬರು.

ಬೆಳಗಾವಿ ಜಿಲ್ಲೆಯ ಗುರ್ಲ-ಹೊಸೂರಿನಲ್ಲಿ ೧೮೯೬ರ ಜನವರಿ ೪ರಂದು ಜನಿಸಿದ ಡಾ॥ ಶಂ.ಬಾ. ಜೋಶಿ ತಮ್ಮ ಕಷ್ಟಮಯ ಜೀವನದಲ್ಲಿ ಉದ್ದಕ್ಕೂ ಪಡೆದ ಅನುಭವ, ನಡೆಸಿದ ಸಾಂಸ್ಕೃತಿಕ ಹಾಗೂ ಸತ್ಯಾನ್ವೇಷಣೆ, ಬಾಳಿನ ಶೋಧ ಅಪಾರ ಹಾಗೂ ಸ್ಮರಣೀಯ. ಇಂಥ ಘನ ವಿದ್ವಾಂಸರಿಗೆ ನಾಡು ಗೌರವಿಸಿದ್ದು ಅವರ ಇಳಿವಯಸ್ಸಿನಲ್ಲಿ-ಈಚೆಗೆ ಮಡಿಕೇರಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿಸುವುದರ ಮೂಲಕ !

ಶಂ.ಬಾ. ಅವರನ್ನು ತೀರ ಹತ್ತಿರದಿಂದ ಕಂಡು, ಅವರೆಲ್ಲ ಕೃತಿಗಳನ್ನು ಸಮರ್ಪಕವಾಗಿ ಅಧ್ಯಯನ ನಡೆಸಿರುವ ನನ್ನ ಮಿತ್ರ ಶ್ರೀ ಮಲ್ಲೇಪುರಂ ಜಿ. ವೆಂಕಟೇಶ್ ಅವರ ಮಾತಿನಲ್ಲಿ ಹೇಳುವುದಾದರೆ–



ಡಾ॥ ಶಂ.ಬಾ. ಜೋಶಿ

**"ಸಾಕಷ್ಟು ಎತ್ತರ, ಮಂದಸ್ಮಿತ ಗಂಭೀರ ಮುಖ, ಆಲೋಚನೆಯ ಪರಿಧಿಯಲ್ಲೇ ತೂಗು ಹಾಕಿರುವ ಕಣ್ಣು, ಸ್ಫುಟವಾದ ದಂತಪಂಕ್ತಿ, ಗೋಧಿ ಬಣ್ಣ, ಖಾದಿಉಡುಪು, ಹೆಗಲಿಗೊಂದು ಬ್ಯಾಗು, ನಿಷ್ಠುರವಾದರೂ ದೃಢೈಕ್ಯಮನದ ಸಾಧಕರು ಎಂದು- ಯಾರಿಗಾದರೂ ಥಟ್ಟನೆ, ಎದ್ದು ಕಾಣುವಂಥ ವ್ಯಕ್ತಿತ್ವ !"**

(ನೋಡಿ : ಪುಟ 25, ಶಂ.ಬಾ. : ಅಧ್ಯಯನ ಲೇ॥ ಮಲ್ಲೇಪುರಂ, ಜಿ. ವೆಂಕಟೇಶ್)

ತಮ್ಮ ಎಂಭತ್ತೆಂಟನೆಯ ವಯಸ್ಸಿನಲ್ಲೂ ದೃಢವಾದ ವೈಚಾರಿಕ ನೆಲೆಗಟ್ಟಿನಲ್ಲಿ ನಿಲ್ಲುವ ಶಂ.ಬಾ, ಈವರೆಗೆ ಇಪ್ಪತ್ತೂರಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ನೂರಾರು ಲೇಖನಗಳನ್ನು ವಿವಿಧ ಪತ್ರಿಕೆಗಳಲ್ಲಿ ಬರೆದಿದ್ದಾರೆ. ಯಾವುದೇ 'ಗುಂಪಿ'ಗೆ ಸೇರದ ಶಂ.ಬಾ. ವೈದಿಕ ಮನೆತನದಲ್ಲಿ ಹುಟ್ಟಿದ ಅವರು ಪಾಶ್ಚಾತ್ಯ ಗ್ರಂಥಗಳ ಜೊತೆಗೆ ಪ್ರಾಚೀನ ಭಾರತೀಯ ಗ್ರಂಥಗಳನ್ನು ತಮ್ಮ ಸಂಶೋಧನಾ ಕ್ಷೇತ್ರಕ್ಕೆ ಮುಖ್ಯ ಅಸ್ತ್ರವನ್ನಾಗಿಸಿಕೊಂಡು ಋಗ್ವೇದ, ರಾಮಾಯಣ, ಮಹಾಭಾರತ-ಭಗವದ್ಗೀತೆ ಇವುಗಳನ್ನು ಆಮೂಲಾಗ್ರವಾಗಿ ಅಧ್ಯಯನ ನಡೆಸಿ ತಮ್ಮದೇ ಆದ ವಿಶಿಷ್ಟ ದೃಷ್ಟಿಕೋನದಲ್ಲಿ 'ಅರ್ಥ ಮತ್ತು ಸತ್ಯ' ಇವುಗಳ ಅನ್ವೇಷಣಾ ಜಿಜ್ಞಾಸೆ ಹೊತ್ತು ಕನ್ನಡಕ್ಕೆ ಉತ್ಕೃಷ್ಟ ಕೃತಿಗಳನ್ನು ನೀಡಿದ್ದಾರೆ. ಅವರ 'ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ'– ಈ ಗ್ರಂಥಕ್ಕೆ ಸಾಹಿತ್ಯ ಅಕಾಡಮಿ ಪ್ರಶಸ್ತಿ ಲಭಿಸಿದೆ.

ಶಂಬಾ ಅವರ ಆಲೋಚನೆಯ ಹಾದಿ ವಿವೇಚನೆಯ ದೃಷ್ಟಿ. ಸಂಶೋಧನೆಯ ಆಳ ಇವುಗಳನ್ನು ಅರಿಯ ಬೇಕಾದರೆ ಅವರ ಕೃತಿಗಳನ್ನೇ ಓದಬೇಕು. ಈಗ ನೋಡಿ :–

"ನನ್ನ ಕಣ್ಣುಗಳನ್ನು ನಾನು ನಂಬಬಹುದೆ? ಎಂಬ ಸಂದೇಹಕ್ಕೆ ಒಳಗಾದೆ. ಬಲ್ಲವರನ್ನು ಕೇಳಿ ತಿಳಿಯಬೇಕು, ಎಂಬ ಹಂಬಲದಿಂದ ಇದನ್ನೂ ಬರೆಯಬೇಕೆಂದೆನಿಸಿತು. ಕಳೆದ ಮೂರು ವರ್ಷಗಳಿಂದ ಇದು ನಿಜವಿರಬಹುದೆ, ಎಂಬೀ ಪ್ರಶ್ನೆ ಪೀಡಿಸುತ್ತಲಿದೆ......... ವಿಚಾರಗಳನ್ನು ಯಾರ ಎದುರೂ, ಒಮ್ಮೆಲೆ ಹೇಳಲು ಧೈರ್ಯ ಸಾಲದೆ, ಆ ಮೊದಲು ಎರಡು ವರುಷ ಹೋದುವು. ನನಗೆ ತೋಚಿದ ಆ ಸಂಗತಿಗಳು ನನ್ನನ್ನು ಸುಮ್ಮನೆ ಇರಗೊಡಲೊಲ್ಲವು. ಕೆಲವು ಚಿಕಿತ್ಸಕ ಮಿತ್ರರೊಡನೆ ಚರ್ಚಿಸಿದ್ದಾಯಿತು. 'ನಿಷ್ಕರ್ಷಕ್ಕಾಗಿ ಈ ಸಂಗತಿಗಳನ್ನು ವಿಮರ್ಶಕ ವಿದ್ವಾಂಸರ ಎದುರು ಇಡಲು ಅಡ್ಡಿಯಿಲ್ಲ'...................."

(ನೋಡಿ: ಪುಟ 9, ಹಾಲು ಮತ ದರ್ಶನ, ಲೇ॥ ಶಂ.ಬಾ. ಜೋಶಿ)

ತಾವು ಏನು ಹೇಳಬೇಕು ಎಂಬುವರ ಬಗೆಗೆ ಸ್ಪಷ್ಟ ಅರಿವಿನ ಮೇಲೆ ಶಂ.ಬಾ. ತಮ್ಮ ಪಾಂಡಿತ್ಯವನ್ನು ಪ್ರದರ್ಶಿಸುತ್ತಾರೆ. ಇಳಿ ವಯಸ್ಸಿನಲ್ಲೂ ದೃಢವಾದ ಮನಸ್ಸು ಅವರದು.

ಡಾ॥ ಶಂ.ಬಾ. ಜೋಶಿ ಅವರು ನಮ್ಮ ಸಮಕಾಲೀನ ಘನ ವಿದ್ವಾಂಸರಾಗಿ ನಾಡಿಗೆ ನೀಡಿರುವ ಕೊಡುಗೆ ಅಪಾರವಾದರೂ ಪಡೆದದ್ದು ಕಡಿಮೆಯೇ. ಸುಮಾರು ಅರ್ಧಶತಮಾನದಿಂದಲೂ ಅವರು ನೀಡುತ್ತಿರುವ ವಿಚಾರಗಳನ್ನು ನಮ್ಮ ಯುವಕರು ತಮ್ಮ ಬಾಳಿನ ದಾರಿಯ ಬುತ್ತಿಯನ್ನಾಗಿಸಿಕೊಳ್ಳಬೇಕು. ಶಂಬಾ ಅವರ ವಿಚಾರ ಆಗ ಸಾರ್ಥಕವಾಗುತ್ತದೆ.

**—ಕೊಂಡಜ್ಜಿ ಕೆ. ವೆಂಕಟೇಶ್**

## ಶಂ.ಬಾ. ಜೋಶಿ ಅವರ ಕೃತಿಗಳು

| | |
|---|---|
| ಅರವಿಂದಘೋಷರ ಚರಿತ್ರೆ | 1921 |
| ಉಪನಿಷತ್ ರಹಸ್ಯ | 1928 |
| ಲೋಕಮಾನ್ಯರ ಕಥಾಮೃತಸಾರ | 1930 |
| ಕಣ್ಮರೆಯಾದ ಕನ್ನಡ | 1933 |
| ಮಹಾರಾಷ್ಟ್ರದ ಮೂಲ | 1934 |
| ಕರ್ನಾಟಕದ ವೀರ ಕ್ಷತ್ರಿಯರು | 1936 |
| ಕಂನುಡಿಯ ಹುಟ್ಟು | 1937 |
| ಶಿವ ರಹಸ್ಯ | 1939 |
| ಕಂನಡದ ನೆಲೆ | 1939 |
| ಕರ್ಣನ ಮೂರು ಚಿತ್ರಗಳು | 1947 |
| ಯಕ್ಷ ಪ್ರಶ್ನೆ | 1947 |
| ಕಂನಾಡ ಕತೆ | 1948 |
| ಸಮಾಜ ದರ್ಶನ | 1949 |
| ಕಂನುಡಿಯ ಜೀವಾಳ | 1950 |
| ದಾರಿಯ ಬುತ್ತಿ | 1950 |
| ಹಾಲುಮತ ದರ್ಶನ | 1960 |
| ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ | 1967 |
| ಋಗ್ವೇದಸಾರ ನಾಗಪ್ರತಿಮಾ ವಿಚಾರ | 1972 |
| ಭಾಷೆ ಮತ್ತು ಸಂಸ್ಕೃತಿ | 1975 |
| ಪ್ರವಾಹ ಪತಿತರ ಕರ್ಮ : ಹಿಂದೂ ಎಂಬ ಧರ್ಮ | 1976 |
| ಭಗವದ್ಗೀತೆಯೊಳಗಿನ ರಾಜಯೋಗ | 1977 |
| ಸಾಂಸ್ಕೃತಿಕ ಮೂಲದಲ್ಲಿನ ತಾತ್ವಿಕ ಚಿಂತನಗಳು | 1978 |
| ವೈವಸ್ವತ ಮನು ಪಣ್ರೀತ ಮಾನವ ಧರ್ಮದ ಆಕೃತಿ | 1979 |

*

(14ನೇ ಪುಟದಿಂದ)
ನೇಯ ಸ್ಥಾನಗಳಾಗುತ್ತವೆ. ಅಂತಹ ಭಾಷೆಗಳನ್ನು ಇಡೀ ನಾಡಿನ ಜನತೆಗೆಲ್ಲಾ ಒದಗಿಸುವ ಶಕ್ತಿಯನ್ನು ಅವು ಪಡೆದಿಲ್ಲ. ನೂರಕ್ಕೆ ೭೦ ಪಾಲು ಅನಕ್ಷರಸ್ಥರಿರುವ ಈ ನಾಡಿನಲ್ಲಿ ಇಡೀ ಪ್ರಪಂಚದಲ್ಲೇ



ಪ್ರೊ॥ ಕ. ವೆಂ.ರಾಜಗೋಪಾಲ

ಸಮರ್ಥವಾದ ಭಾಷೆಯೆನ್ನಿಸಿಕೊಂಡಿರುವ ಇಂಗ್ಲಿಷ್ ಕೂಡ ಯಶಸ್ವಿಯಾಗಲಾರದು. ಅದನ್ನು ಸುಮಾರ ಒಂದು ಶತಮಾನ ಕಾಲವಾದರೂ ನಾವು (ವಿದ್ಯಾಭಿಲಾಷಿಗಳು) ಕಲಿಯಲು, ಬಳಸಲು ಯತ್ನಿಸಿದ್ದೇವೆ. ಇದರ ಫಲವಾಗಿ 'ಜ್ಞಾನ'ವನ್ನು ಹರಡುವಲ್ಲಿ ನಮ್ಮ ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿ ಮಾಡುವಲ್ಲಿ ನಾವು ಸೋಡಿರುವುದಕ್ಕೆ ಒಂದು ವ್ಯಾವಹಾರಿಕ ಭಾಷೆಯಿಲ್ಲದಿರುವುದೂ ಕಾರಣವಾಗಿದೆ. ಆದುದರಿಂದ ಆದಷ್ಟು ಬೇಗ ಕನ್ನಡವನ್ನು ಬಲವಂತವಾಗಿಸಿ ನಾಡಿನ ಜನತೆಯ ಬದುಕು ಉತ್ತಮಗೊಳ್ಳುವಂತೆ ಮಾಡಬೇಕಾದುದು ನಮ್ಮೆಲ್ಲರ ಕರ್ತವ್ಯವಾಗಿದೆ. *

---

# ಎಲ್ಲ ಜ್ಞಾನಕ್ಕೂ ಮೂಲ ಅಕ್ಷರ ಜ್ಞಾನ
# ಕಡ್ಡಾಯವಾಗಿ ಅಕ್ಷರ ಕಲಿಯಿರಿ

ಅಭಿವೃದ್ಧಿಯ ಹಾದಿಯಲ್ಲಿ ಅನಕ್ಷರತೆ ಒಂದು ದೊಡ್ಡ ಆತಂಕ. ಇದನ್ನು ತೊಡೆದು ಹಾಕಲು ಸರ್ಕಾರ ಎರಡು ರೀತಿಯಲ್ಲಿ ಪ್ರಯತ್ನಿಸುತ್ತಿದೆ :

**೧. ಕಡ್ಡಾಯ ಪ್ರಾಥಮಿಕ ಶಿಕ್ಷಣ**

**೨. ವಯಸ್ಕರ ಶಿಕ್ಷಣ**

ಈಗ ರಾಜ್ಯದ ಪ್ರತಿ ಹಳ್ಳಿಯಲ್ಲೂ ಪ್ರಾಥಮಿಕ ಶಾಲಾ ಸೌಲಭ್ಯವಿದೆ. ಐದು ವರ್ಷ ಹತ್ತು ತಿಂಗಳು ತುಂಬಿದ ಮಕ್ಕಳನ್ನು ತಪ್ಪದೆ ಶಾಲೆಗೆ ಕಳುಹಿಸುವುದು ಪೋಷಕರ ಪ್ರಥಮ ಕರ್ತವ್ಯ.

ಪ್ರಾಥಮಿಕ ಶಿಕ್ಷಣದಿಂದ ವಂಚಿತರಾದ ೧೮ ವರ್ಷದಿಂದ ೪೦ ವರ್ಷದೊಳಗಿನ ವಯಸ್ಕರಿಗೆ ಅಕ್ಷರ ಮತ್ತು ವೃತ್ತಿಜ್ಞಾನ ನೀಡಲು ವಯಸ್ಕರ ಶಿಕ್ಷಣ ಸೌಲಭ್ಯವಿದೆ. ಈ ಸೌಲಭ್ಯ ಪಡೆಯಲು ತಾಲ್ಲೂಕಿನ ವಯಸ್ಕರ ಶಿಕ್ಷಣ ಕಾರ್ಯಕರ್ತರು ಅಥವಾ ಸಹಾಯಕ ಶಿಕ್ಷಣಾಧಿಕಾರಿಗಳನ್ನು ಭೇಟಿ ಮಾಡಿ.

ಮಾನವನ ಬದುಕಿಗೆ ಅಕ್ಷರ ಜ್ಞಾನ ಅತ್ಯಂತ ಆಗತ್ಯ. ಅದನ್ನು ತಪ್ಪದೆ ಸಂಪಾದಿಸಿಕೊಳ್ಳಿ.

(ನಂ. ನಿವಾಪ್ರ/ವಾಪ್ರವಿ/ಸಿ1/72/83-84 ದಿನಾಂಕ : 11-1-84)

**ಪ್ರಕಟಣೆ : ವಾರ್ತಾ ಮತ್ತು ಪ್ರಚಾರ ಇಲಾಖೆ,**
**ಕರ್ನಾಟಕ ಸರ್ಕಾರ.**

# ನೇಮಕಕ್ಕೆ ಮುನ್ನ ಕನ್ನಡ ಮನ್ನಾ

**ನೆತ್ತರಕೆರೆ ಉದಯಶಂಕರ್**

'ನೇಮಕಕ್ಕೆ ಮುನ್ನ ಕನ್ನಡ ಪರೀಕ್ಷೆ ಮನ್ನಾ' -ಕನ್ನಡ ರಾಜ್ಯೋತ್ಸವಕ್ಕೆ ರಾಜ್ಯದ ಭಾಷಾ ಅಲ್ಪ ಸಂಖ್ಯಾತರಿಗೆ ರಾಜ್ಯ ಸರ್ಕಾರ ಕೊಟ್ಟ ಕೊಡುಗೆ ಇದು. ಅಂದರೆ ನೇಮಕಾತಿಗೆ ಮುನ್ನ ಭಾಷಾ ಅಲ್ಪಸಂಖ್ಯಾತರು ಕಡ್ಡಾಯವಾಗಿ ಕನ್ನಡ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕೆಂದಿಲ್ಲ. ತಮ್ಮ ಪ್ರೊಬೇಷನ್ ಅವಧಿಯಲ್ಲಿ ಕನ್ನಡ ಪರೀಕ್ಷೆಯನ್ನು ಪಾಸು ಮಾಡಿಕೊಂಡರಾಯಿತು.

ಸರಕಾರ ಹೊರಡಿಸಿದ ಆಜ್ಞೆಯಂತೆ, ಈಗ 'ಎ' ವಿಭಾಗದ ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳಿಗೆ ಇರುವ ಸೌಲಭ್ಯಗಳನ್ನು 'ಸಿ' ಮತ್ತು 'ಡಿ' ಗ್ರೂಪ್ಪುಗಳಿಗೆ ಆಯ್ಕೆಯಾದ ಅಭ್ಯರ್ಥಿಗಳಿಗೂ ವಿಸ್ತರಿಸಲಾಗುತ್ತದೆ.

ಅಂದರೆ. ಈವರೆಗೆ ಐಎಎಸ್ ಮಟ್ಟದ ಅಧಿಕಾರಿಗಳಿಗೆ ಮಾತ್ರ ಕಡ್ಡಾಯ ಕನ್ನಡ ಪರೀಕ್ಷೆ ಪಾಸ್ ಮಾಡಿಕೊಳ್ಳದಿದ್ದರೂ, ಕೆಲಸಕ್ಕೆ ಸೇರುವ ಅವಕಾಶ ಇತ್ತು. ಇನ್ನು ಮೂರು ಮತ್ತು ನಾಲ್ಕನೇ ದರ್ಜೆ ನೌಕರರು ಕೂಡಾ ಕಡ್ಡಾಯ ಕನ್ನಡ ಪರೀಕ್ಷೆ ಪಾಸ್ ಮಾಡದಿದ್ದರೂ ನೌಕರಿಗೆ ಸೇರಬಹುದು. ಸೇರಿದ ಮೇಲೆ 'ಪರೀಕ್ಷೆ ಪಾಸ್ ಮಾಡಿದ ಶಾಸ್ತ್ರ' ಮುಗಿಸಿದರೆ ಆಯಿತು!

ಸರ್ಕಾರದ ಆಜ್ಞೆಯ ಪ್ರಕಟಣೆ ಹೊರಬೀಳುತ್ತಿದ್ದ ಹಾಗೇ ನಾಡಿನ ಉದ್ದಗಲಕ್ಕೂ ಪ್ರತಿಭಟನೆಯ ಕೂಗು ಕೇಳಿಬಂತು. 'ಬೇಡ, ರಾಜ್ಯೋತ್ಸವದ ಕೊಡುಗೆಯಾಗಿ ಕನ್ನಡಿಗರಿಗೆ ಈ ಅನ್ಯಾಯ ಮಾಡಬೇಡಿ' ಎಂಬ ಮನವಿಗಳ ಪೂರ ಸರಕಾರಕ್ಕೆ ಹರಿಯಿತು. ಕನ್ನಡ ಸಾಹಿತಿಗಳು ಕಲಾವಿದರು, ವಿವಿಧ ಸಂಘ ಸಂಸ್ಥೆಗಳು, ಕನ್ನಡ ಚಳವಳಿಗಾರರು, ರಾಜಕುಮಾರ್-ಅಭಿಮಾನಿಗಳು-ಹೀಗೆ ನೂರಾರು, ಸಾವಿರಾರು, ಮಂದಿ 'ಆಜ್ಞೆ ಹಿಂತೆಗೆಯಿರಿ' ಎಂದು ಕೂಗಿದರು. 'ಬೀದಿಗಿಳಿಯುವ' ಬೆದರಿಕೆ ಹಾಕಿದರೂ. 'ಬೀದಿಗೆ ಇಳಿದೂ' ಎಚ್ಚರಿಕೆ ಕೊಟ್ಟರು. ಈಚೆಗೆ 'ಬೆಂಗಳೂರ್ ಬಂದ್' ಸಹ ಜರುಗಿತು.

ಆದರೆ ಸರ್ಕಾರ ತನ್ನ ನಿಲುವಿಗೆ 'ನ್ಯಾಯವನ್ನು ವಿಸ್ತರಿಸಿದ' ಸಮರ್ಥನೆಯನ್ನು ಕೊಟ್ಟಿದೆ. 'ಅಧಿಕಾರಿಗಳಿಗೇ ಮಾತ್ರ ಇದ್ದ ಸೌಲಭ್ಯವನ್ನು, ಕೆಳದರ್ಜೆಯ ನೌಕರರಿಗೂ ಒದಗಿಸಿಕೊಟ್ಟಿದ್ದೇವೆ. ಅವರಿಗಾಗುತ್ತಿದ್ದ ಅನ್ಯಾಯ ಸರಿಪಡಿಸಿದ್ದೇವೆ!'

ಕನ್ನಡಿಗರು ತೀರಾ ದುರದೃಷ್ಟವಂತರು, ಎಂದೆನ್ನಿಸುತ್ತದೆ ನನಗೆ! ಏಕೆಂದರೆ ಯಾವುದೇ ಒಂದು ಚಳವಳಿ, ಮೊದಲಿಗೆ ಇಲ್ಲ ಹುಟ್ಟಿಕೊಳ್ಳುವುದಿಲ್ಲ; ಅನ್ಯಾಯದ ಅರಿವು ಉಂಟಾದಾಗ ಚಳವಳಿ ಹುಟ್ಟಿಕೊಳ್ಳುತ್ತದೆ-ಆದರೆ ಅಷ್ಟೇ ತೀವ್ರ ಗತಿಯಲ್ಲಿ ಬೆಳೆಯುವುದಿಲ್ಲ; ಒಂದು ವೇಳೆ ಶೀಘ್ರವಾಗಿ ಚಳವಳಿ ಬೆಳೆಯಿತು. ಎನ್ನಿ-ಸರ್ಕಾರದ

# ಕರ್ನಾಟಕ ಮತ್ತು ರಾಜ್ಯೋತ್ಸವ

ತಿರುಮಲೆ ಶ್ರೀರಂಗಾಚಾರ್ಯರು

ಕನ್ನಡ ನಾಡಿನ ಜನತೆಗೆ 'ರಾಜ್ಯೋತ್ಸವ'ದ ಸಂಭ್ರಮ. ಕಳೆದ ವರ್ಷತಾನೆ ಬೆಳ್ಳಿಯ ಹಬ್ಬದ ರಾಜ್ಯೋತ್ಸವ ನಡೆಸಿ ಮುಂದಿನ ಕಾಲುಶತಮಾನದತ್ತ ಹೆಜ್ಜೆ. ಈ ವರ್ಷ ಕಳೆದ ವರ್ಷದ ಬೆಳ್ಳಿಹಬ್ಬದಂತೆಯೇ ಇನ್ನೂ ಪ್ರಶಸ್ತ-ಕಾರಣ ಈ ರಾಜ್ಯೋತ್ಸವ ನಾಡಿನಲ್ಲಿ ಹೊಸ ಗಾಳಿಯ ಬೀಸಿನಲ್ಲಿ ಕನ್ನಡದ ಬಾವುಟ ಹಾರಿಸುತ್ತಿದೆ–ನವೋದಯ ಶಿಲ್ಪಿ ಆಚಾರ್ಯ ಬಿ.ಎಂ. ಶ್ರೀಕಂಠಯ್ಯನವರ ಜನ್ಮಶತಾಬ್ಧಿಯ ವರ್ಷ. ಕನ್ನಡ ನುಡಿಗೆ–ಕನ್ನಡ ಜನಪದಕ್ಕೆ– ಕರ್ನಾಟಕಕ್ಕೆ ಹೊಸತನವನ್ನು ತುಂಬಿ: ನಾಡಲ್ಲಿ ಒಕ್ಕೊರಲಿಂದ "ಸಿರಿಗನ್ನಡಂ ಗೆಲ್ಗೆ ಬಾಳ್ಗೆ-ಕನ್ನಡ ರಾಯ್ ಗೆಲ್ಗೆ ಬಾಳ್ಗೆ" ಎಂದು ಕೂಗುವಂತೆ ಮಾಡಿದವರೇ ಆಚಾರ್ಯಶ್ರೀ ಅವರು !!

ಹರಿದು ಹಂಚಿಹೋಗಿದ್ದ ಕರ್ನಾಟಕ ಒಂದಾಗಬೇಕು. ಅಖಂಡ ಕರ್ನಾಟಕವನ್ನು ಕಟ್ಟಬೇಕೆಂದು ನಿರಂತರ ದುಡಿದ ಮಹಾವರೇಣ್ಯರನ್ನು ಹೆಸರು ಹೇಳಿ ನೆನೆವುದೇ ? ಅವರ ಮಾತುಗಳನ್ನು ಎತ್ತಿಹೇಳಿ ಹೊಗಳುವುದೇ ? ಈ ರಾಜ್ಯೋತ್ಸವ ಏಕೆ ?–ಇದು ಬರಿ ಹಬ್ಬವಲ್ಲ–ಇದು ದೀಕ್ಷಾದಿನ. ಈ ನಾಡು–ನುಡಿ ಜನಪದ ಮೂರೂ ಚೈತನ್ಯ ತಳೆಯಬೇಕಾಗಿದೆ-ಅದಕ್ಕಾಗಿ ಕನ್ನಡಿಗರ ಸಂಕಲ್ಪ–ದೀಕ್ಷೆ ತೊಡಬೇಕಾಗಿದೆ. ಆ ದಿನವೇ ಈ ರಾಜ್ಯೋತ್ಸವ ದಿನ.

"ಕನ್ನಡ ಭಾಷೆಗೆ ಯಾವ ರೀತಿಯಲ್ಲಿಯೂ ಅಪಾಯ ತಟ್ಟದ ಹಾಗೆ ಕನ್ನಡ ನಾಡಿನಲ್ಲಿ ಅದಕ್ಕೆ ಪ್ರಧಾನ ಸ್ಥಾನವನ್ನು ಕೊಟ್ಟು, ಭಗವಂತನು ನಮಗ ಕೊಟ್ಟಿರತಕ್ಕ ಬಲವನ್ನು–ಧನಬಲವನ್ನು ಮತ್ತು ಬುದ್ಧಿ ಬಲವನ್ನು–ಅದಕ್ಕಾಗಿ ವಿನಿಯೋಗಿಸುವುದು ಕನ್ನಡಿಗರ ಕರ್ತವ್ಯ ಎಂದು ನಾನು ಭಾವಿಸಿದ್ದೇನೆ."

ಇದು ಆಚಾರ್ಯ ಶ್ರೀ ಅವರ ಮಾತು. ಹೊಸದಾಗಿ ಕನ್ನಡದ ಕೂಗೇ ಬೇಕಾಗಿಲ್ಲ. ಶ್ರೀ ಅವರ ಹೃದಯ ದೇಗುಲದಿಂದ ಕನ್ನಡದ ಪ್ರಣವವೇ ಹೊರಬಂದು ಈ ನಾಡನ್ನು ಆವರಿಸಿದೆ.

"ಜನರ ಮುಖಂಡರೂ ಮೇಧಾವಿಗಳೂ ಎಷ್ಟೇ ಭಾಷೆಗಳನ್ನು ಕಲಿಯಲಿ, ಜನ ಸಾಮಾನ್ಯವೂ, ಸರ್ವಜನವೂ ದೇಶಭಾಷೆಯನ್ನು ಆಡತಕ್ಕದ್ದೇ ? ಇಲ್ಲ ಅದನ್ನು ಕಿತ್ತು ಆ ಸ್ಥಳದಲ್ಲಿ ಭಾರತ ಭೂಮಿಯ ಹೆಸರನ್ನು ಹೇಳಿಕೊಂಡು ದಿಗ್ವಿಜಯಕ್ಕೆ ಬಂದಿರುವ ಬೇರೊಂದು ಭಾಷೆಯನ್ನು ಹೂಡತಕ್ಕದ್ದೇ ? ಎಚ್ಚರಿಕೆಯಿಂದ ಯೋಚನೆ ಮಾಡಬೇಕು"

ಭಾರತ ಸ್ವತಂತ್ರವಾಯಿತು. ಹಾಗೇ ಕರ್ನಾಟಕವೂ ಪುನರ್ಜನ್ಮತಾಳಿತು–

# ಸಾಮಾನ್ಯಜ್ಞಾನ

ಕನ್ನಡ ಶೈಕ್ಷಣಿಕ ಮಾಸ ಪತ್ರಿಕೆ

೧೯೮೨-೮೩

(ಜುಲೈ 82 ರಿಂದ ಜೂನ್ 83ರ ಹನ್ನೆರಡು ಸಂಚಿಕೆಗಳ ಸಂಗ್ರಹ)

ಕೆ.ಪಿ.ಎಸ್.ಸಿ. ಮುಂತಾದ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಉಪಯುಕ್ತ ಹಾಗೂ ಎಲ್ಲಾ ವರ್ಗದ ವಿದ್ಯಾರ್ಥಿಗಳಿಗೂ ಅಗತ್ಯವಾದ ಕೈಪಿಡಿ.

**ಪುಟ : ೨೦೦** **ಬೆಲೆ ರೂ. ೧೦/-**

ಇಂದೇ ಬರೆಯಿರಿ :

ಸಂಪಾದಕರು,

**ಸಾಮಾನ್ಯ ಜ್ಞಾನ**

ಕನ್ನಡ ಶೈಕ್ಷಣಿಕ ಮಾಸಪತ್ರಿಕೆ

216, ಸುಬ್ರಮಣ್ಯನಗರ, ಬೆಂಗಳೂರು-560 021.

ಕಾಲುಶತಮಾನದ ಬಾಳನ್ನೂ ಕಂಡಿತು. ಮಗುತನವನ್ನು ದಾಟಿ, ಯುವ ತನವೂ ಕಂಡೂ ದಿಕ್ಕೆಟ್ಟ ಸ್ಥಿತಿಯಲ್ಲೇ ಕರ್ನಾಟಕ ಇದೆಯಲ್ಲ ಎಂಥ ದೌರ್ಭಾಗ್ಯ !! ಈ ದುಃಸ್ಥಿತಿಗೆ ಏನು ಕಾರಣ? ಕನ್ನಡ–ಕರ್ನಾಟಕ–ಕನ್ನಡಿಗ ಈ ಮೂವರ ಸ್ಥಿತಿ-ಗತಿ ಏನು?–ನಾಡಿನ, ನಮ್ಮ ಭವಿಷ್ಯ ಏನು?–ಈಗ ನಾವೇನು ಮಾಡಬೇಕು ಎಂಬ ಚಿಂತನದ ವಿಚಾರ ವೇದಿಕೆಯಾಗಬೇಕು ಈ ರಾಜ್ಯೋತ್ಸವ.

**ಏಕೀಕರಣ-ಸ್ಫೂರ್ತಿ ಕಿರಣ:**

ಕರ್ನಾಟಕದಲ್ಲಿ ಚಳವಳಿ ಭಾರತದ ಸ್ವಾತಂತ್ರ್ಯ ಹೋರಾಟದ ಜೊತೆಗೇ ಆರಂಭ ವಾಯಿತು. "ಭಾರತವು ಸ್ವತಂತ್ರವಾಗಬೇಕು; ಅದರ ಜೊತೆಯಾಗಿ ರಾಜಕೀಯ ದುರುದ್ದೇಶದ ಫಲವಾಗಿ ಹರಿದು ಹಂಚಿಹೋಗಿರುವ ಕರ್ನಾಟಕವೂ ಒಂದಾಗಬೇಕು. ಭಾರತ ಸ್ವಾತಂತ್ರ್ಯ ಸಾಧನೆ. ಭಾರತೀಯರೆಲ್ಲರಿಗೆ ಮೋಕ್ಷ-ಪ್ರಗತಿ ಸಾಧನ; ಕರ್ನಾಟಕ ನಿರ್ಮಾಣ ಕನ್ನಡ ಜನಪದದ ಭಾಗ್ಯದ ಬಾಗಿಲು" ಈ ಹಿನ್ನೆಲೆಯಲ್ಲಿ ನಡೆಯಿತು ಏಕೀ ಕರಣದ ಚಳವಳಿ.

**ಸಂಕಲ್ಪ ದೀಕ್ಷೆ:**

ಕರ್ನಾಟಕವನ್ನು ರೂಪಿಸಿದ ಉದ್ದೇಶ ಏನು? ರಾಷ್ಟ್ರದಲ್ಲಿ ಭಾಷಾ ಮೂಲವಾದ ರಾಜ್ಯಗಳ ವ್ಯವಸ್ಥೆಗೆ ಮೂಲಕಾರಣ ಏನು? ತತ್ವ ಏನು? ಕರ್ನಾಟಕದ ನುಡಿ ಕನ್ನಡ. ಆ ಭಾಷೆಯೇ ನಾಡ ಬಹುತೇಕ ಜನತೆಯ ಭಾಷೆ. ಸಂವಿಧಾನವೇ ಕೊಟ್ಟಿರುವ ಸ್ಥಾನ ಅದು. ಅದನ್ನು ಸ್ಪಷ್ಟವಾಗಿ ಈಗ ಮತ್ತೆ ಹೇಳಿದೆ ಅಷ್ಟೆ. ಕರ್ನಾಟಕದಲ್ಲಿ ಕನ್ನಡವೇ ಪ್ರಭುತ್ವ ಭಾಷೆ. ಆ ಭಾಷೆ ನಾಡಿನ ಜನರಿಗೆಲ್ಲ ತಿಳಿದಿರಬೇಕು. ಇದು ನಿರಪೇಕ್ಷೆ ಯಲ್ಲ. ಈ ಪ್ರಯತ್ನ ಮಾಡುವ ವಿರೋಧ ಸಂವಿಧಾನ ವಿರೋಧ ಮಾತ್ರ ಅಲ್ಲ. ದೇಶದ್ರೋಹ, ಸಮಾಜದ್ರೋಹ !!

ಕರ್ನಾಟಕದ-ಕನ್ನಡಿಗರ ಸರ್ವತೋಮುಖ ಪ್ರಗತಿ ಸಾಧನೆಯೇ ನಮ್ಮ ಗುರಿ. ಈ ಗುರಿಯ ಸಾಧನೆ ಎರಡು ಭಾಗ್ಯಗಳನ್ನು ದೊರಕಿಸುತ್ತದೆ. ಕನ್ನಡ ನಾಡಿನ- ಆ ಮೂಲಕ ಭಾರತದ ಏಳಿಗೆಯನ್ನು ಈ ದ್ವಿಮುಖ ಲಾಭದ ಯುಕ್ತತೆಯನ್ನು ಕನ್ನಡಿ ಗರು ಗಮನಿಸಬೇಕು. ಭಾರತಕ್ಕಾಗಿ ದುಡಿಯುವವರು ಕೋಟಿ ಕೋಟಿ ಇದ್ದಾರೆ. ಕರ್ನಾಟಕದ ಕಡೆ ನೋಡುವ ಜನ ಯಾರು? ಕನ್ನಡಿಗರಲ್ಲದೆ ಈ ನಾಡಿಗೆ ದುಡಿಯುವ ಜನ ಯಾರಿದ್ದಾರೆ? ಕರ್ನಾಟಕದ ಪ್ರಗತಿಯ ಮೂಲಕ ಭಾರತದ ಕೀರ್ತಿ ಸಾಧನೆಗೆ ತೊಡಗುವುದೇ ಕನ್ನಡಿಗರೆಲ್ಲ ಮಾಡಬೇಕಾದದ್ದು. ಇದು ಅನಿವಾರ್ಯ.

**ಕೇಳುತಿದೆ ಕನ್ನಡದ ಕೂಗು**

ಕನ್ನಡಿಗರಭಿಮಾನ ಚಿಗುರೆದ್ದಿದೆ. ಸಾಹಿತ್ಯ ಸಾಮ್ರಾಜ್ಯದಲ್ಲಿ ಎದ್ದ ಅಲೆಗಳು ಜನತೆಯನ್ನು ಬಡಿದು ಎಬ್ಬಿಸಿದೆ ! ವೈಚಾರಿಕ ಚಿಂತನ-ಪ್ರಗತಿ ಚಿಂತನ ಇದಕ್ಕೆ ಮೆರುಗು ಕೊಟ್ಟು ಹಬ್ಬುತ್ತಿದೆ. ರಾಜಕೀಯ ಜಾಗೃತಿ ನಾಡಿಗೆಲ್ಲ ಒಂದು ಹೊಸ ಕಳೆಯ ತಂದಿದೆ.

ಸ್ವಾರ್ಥರಾಜಕೀಯದಿಂದ ಕೆಟ್ಟರು ಕನ್ನಡಿಗರು. ರಾಜಕೀಯ ಕನ್ನಡಿಗರಿಗೆ ಯಾವ ಒಳಿತನ್ನೂ ಮಾಡಲಿಲ್ಲ. ರಾಜಕಾರಣ ನಾಡಿಗೆ ತಂದದ್ದು ಹಗರಣ ಒಂದೇ. ಅವರ ನಾಡಿನಲ್ಲಿ ಕನ್ನಡಿಗರಿಗೆ ವಂಚನೆ! ಇದರಿಂದ ವಿಮೋಚನೆಗ ದಿಟ್ಟ ನಿರ್ಧಾರ. ಕನ್ನಡ ಜನತೆಯ ನಿರ್ಧಾರದಲ್ಲಿ ಸತ್ಯ ಇದೆ-ಸತ್ವ ಇದೆ-ಧರ್ಮ ಇದೆ ನೀತಿ ನಿರ್ದೇಶನ ಇದೆ.

**ನಾಡರಥ ಸಾಗುತಿದೆ-ಜನತೆಯ ಕೂಗು ಕೇಳುತಿದೆ :**

ನಾಡರಥ ಸಾಗುತಿದೆ ಬನ್ನಿ-ಕನ್ನಡದ ತೇರು ನಿಮ್ಮ ಕಣ್ಮುಂದೆ ಸಾಗುತಿದೆ ಎದ್ದೋಡಿ ಬನ್ನಿ. ಚಾಚಿ ನಿಮ್ಮ ಕೈ; ಮಣಿದು ಕೈಯಿಕ್ಕಿ ಎಳೆಯುರುದ್ದಕ್ಕೂ ನಾಡಿನುದ್ದಗಲಕ್ಕೆ. ಇದಕ್ಕೆ ಅಡ್ಡಿ ನಿಲ್ಲುವರಾರು? ಅಡ್ಡ ಬರುವವರಾರು? ಬುದ್ಧಿ ಹೀನರ ಕೆಲಸ-ನಾಡದ್ರೋಹದ ಕೆಲಸ. ಈ ನಾಡ ಚೇತನವೆ ಮೈತಳೆದು ನಿಂತಿದೆ-ನಡೆಯಿರಿ ಮುಂದೆ. ದಾರಿ ಇಲ್ಲವೇ? ದಾರಿ ಮಾಡಿ. ಮುಳ್ಳು ಬೇಲಿಯ ಅಡ್ಡವೇ? ಕತ್ತರಿಸಿ ಬುಡಸಹಿತ. ಹಳ್ಳಕೊಳ್ಳಗಳೇ-ಮುಚ್ಚಿ ಅಡಿಯಿಕ್ಕಿ. ಪನದ್ದಿ ಒಂದರೂ ನಿಲ್ಲದೀ ದಿಬ್ಬಣ! ನಾಡರಥ ಮುನ್ನಾಗಬೇಕು-ಕನ್ನಡದ ತೇರು ನಾಡೆಲ್ಲ ಸುತ್ತಬೇಕು. ದಾರಿ ಬಿಡಿ ದಾರಿ ಬಿಡಿ, ದಾರಿಮಾಡಿ-ಜಾಗ ಮಾಡಿ. ಬನ್ನಿ. ಬನ್ನಿ ನಾಡವರೆ ಬನ್ನಿ. ಎಳೆಯಿರುದ್ದಕ್ಕೆ ನಾಡ ರಥವನ್ನು. ಕೂಗಿ ಈ ಒಕ್ಕೊರಲ ಕೂಗ, ಈ ಓಂದು ಕೂಗ !-

**ವಿವೇಕದ ಹಾದಿ-ನೆಮ್ಮದಿಯ ದಾರಿ :**

ಕನ್ನಡ ನಾಡು ಔದಾರ್ಯದ ನೆಲೆಬೀಡು. ನಾಡ ಜನತೆಯ ಔದಾರ್ಯ ತಿರುಗುಬಾಣವಾಗಿ ನಾಡವರನ್ನೇ ತಿವಿಯ ಹತ್ತಿದೆ!! ಇದರ ಅರಿವು ಸ್ಪಷ್ಟವಾಗಿ ಈಗ ಜನಕ್ಕೆ ಮೂಡಿದೆ. ಕನ್ನಡತನವೆಂಬ ನಾಡ ಹಿರಿತನಕ್ಕೆ ಮಣೆದಿದೆ ಮರೆಹೊಕ್ಕಿದೆ.

ಕನ್ನಡಿಗರದು ಒಂದೇ ಕುಲ ಕನ್ನಡ ಕುಲ. ಜಾತಿಮತಕ್ಕಿಂತ ಮಿಗಿಲಾದದ್ದು ಈ ನಾಡಕುಲ! ಈ ಕುಲದ ಧರ್ಮವೇ ನಾಡಧರ್ಮ. ಅದರ ನಿತ್ಯಮಂತ್ರ ಒಂದೇ ಅದು "ಸಿರಿಗನ್ನಡಂ ಗೆಲ್ಗೆ" ಕನ್ನಡ ತಾಯ್ ಗೆಲ್ಗೆ-ಬಾಗ್ಗೆ." ನಾಡಿಂದ ನಾವು; ನಾಡಿಗಾಗಿ ನಾವು. ಈ ಹಿನ್ನೆಲೆಯಲ್ಲಿ ಕನ್ನಡ ಜನ ತಮ್ಮ ಕಳೆದಂತೆ, ವಯಸ್ಸು ಬೆಳೆದಂತೆ, ಬುದ್ಧಿ ಬಲಿತಂತೆ, ಶಕ್ತಿ ಹೆಚ್ಚಿದಂತೆ- ಕನ್ನಡಿಗನೊಬ್ಬನೂ ತನ್ನ ತನ್ನ ಕ್ಷೇತ್ರದಲ್ಲಿ ತಾನೇನು ಹೊಸದನ್ನು ಮಾಡೇನು, ನಾಡಿಗೆ ನಾನೇನು ಕೊಟ್ಟೇನು-ಬಿಟ್ಟುಹೋಗೇನು ಎಂದು ಯೋಚಿಸುವವನಾಗಬೇಕು. ಕನ್ನಡ-ಕನ್ನಡ ಬರಿಕೂಗಲ್ಲ ಅದು ಕನ್ನಡಿಗನ ಕರ್ತವ್ಯದ ತೋರುಬೆರಳು-ಈ ನಾಡ ಜೀವನ ಧರ್ಮದ ಸಂಕೇತ ಮಂತ್ರ.

**ನವೋದಯವಾಗಲಿ :**

ಬಂಧನ ಕಡಿದಿದೆ-ಬೆಳಕು ಹರಿದಿದೆ. "ನಾಡ ಕಟ್ಟುವ ಬನ್ನಿ ನಾಡಉಳಿಸುವ ಬನ್ನಿ ನಾಡ ಕಾಯುವ ನಾಡಭಟರಾಗಿ ಬನ್ನಿ" ಇದೇ ರಾಜ್ಯೋತ್ಸವದ ಫಲ ಶೃತಿ. ಇದೇ ಕನ್ನಡಿಗ ನಾಡ ಜನತೆಗೆ ನೀಡುವ ರಾಜ್ಯೋತ್ಸವನ ಸಂದೇಶ.

ಕನ್ನಡಕ್ಕೆ ಜಯವಾಗಲಿ. *

## ......ಕನ್ನಡ ಮುನ್ನಾ

(21ನೇ ಪುಟದಿಂದ)

ಗಮನ ಅತ್ತ ಹರಿಯುವುದಿಲ್ಲ, ಹರಿದರೂ, ಅದನ್ನು ಪರಿಹರಿಸಲು ಅದೂ ಇದೂ ಕುಂಟು ನೆಪಗಳ ಅಡಚಣೆ !

ಕನ್ನಡ ಮಾತನಾಡುವ ಮಂದಿ ಅಲ್ಲಲ್ಲಿ ಹಂಚಿ ಹೋಗಿದ್ದಾಗ, ಭಾಷೆ, ಸಂಸ್ಕೃತಿ ಬೆಳವಣಿಗೆ ದೃಷ್ಟಿಯಿಂದ, ಕರ್ನಾಟಕದ ಏಕೀಕರಣ ಆಗಬೇಕು ಎಂಬ ಕೂಗು ಇಂದು ನಿನ್ನೆ ಹುಟ್ಟಿದ್ದಲ್ಲ; ಈ ಶತಮಾನದ ಮೊದಲ ದಶಕದಲ್ಲೇ 'ಕರ್ನಾಟಕ ಏಕೀಕರಣ'ದ ಕೂಗು ಹುಟ್ಟಿತು. ಅಲ್ಲಿ ಇಲ್ಲಿ ಸತತವಾಗಿ, ಅದರ ಸಾಕ್ಷಾತ್ಕಾರಕ್ಕೆ ಪ್ರಯತ್ನ ನಡೆಯಿತು. ಆದರೆ ಮೈಸೂರು ಸಂಸ್ಥಾನದಲ್ಲಿ ತಮ್ಮ 'ಭಾಷೆ, ಬದುಕು, ಸಂಸ್ಕೃತಿ ಸುರಕ್ಷಿತ' ಎಂದುಕೊಂಡಿದ್ದ ಹಳೇ ಮೈಸೂರಿನ ಕನ್ನಡಿಗರಿಂದಲೇ ಅದಕ್ಕೆ ವಿರೋಧ ಅಡ್ಡಿ. ಈ ವಿರೋಧದ ಆತಂಕ, 1956ವರೆಗೂ ಅವ್ಯಾಹತವಾಗಿಯೇ ಕೇಳಿಬಂತು. ಅದಕ್ಕೂ ಮೊದಲು 'ಸ್ವಾತಂತ್ರ್ಯ ಸಂಗ್ರಾಮದ' ಆದ್ಯ ಸಮಸ್ಯೆ ಎದುರಾದದ್ದು ಕೂಡಾ ಒಂದು ಕಾರಣ.

ಒಟ್ಟು ಪರಿಣಾಮ, ಏಕೀಕೃತ ಕರ್ನಾಟಕ, ಅದೂ 'ಮೈಸೂರು ರಾಜ್ಯ' ಎಂಬ ಹೆಸರಿನಲ್ಲಿ ಜನ್ಮತಾಳಲು ಕನ್ನಡಿಗರು ಕಾಯಬೇಕಾಗಿ ಬಂದದ್ದು ಒಂದೆರಡು ವರ್ಷಗಳಲ್ಲ, ಈ ಶತಮಾನದ ಮೊದಲ ದಶಕದಿಂದ, ಆರನೇ ದಶಕದವರೆಗೆ ಸುಮಾರು ಐವತ್ತು ವರ್ಷಗಳು !

ಅಂತೂ, 1956ರಲ್ಲಿ 'ಮೈಸೂರು ರಾಜ್ಯ' ಏಕೀಕೃತ ಕನ್ನಡಿಗರ ರಾಜ್ಯ ಉದಯಿಸಿತು. ಸಮಸ್ಯೆ ಮುಗಿಯಲಿಲ್ಲ. ಕನ್ನಡ ಮಾತನಾಡುವ ಮಂದಿಯೇ ಅಧಿಕವಾಗಿರುವ, ರಾಜ್ಯಕ್ಕೆ ಅವರ ಭಾಷೆ, ಸಂಸ್ಕೃತಿಯನ್ನು ಸೂಚಿಸುವ 'ಕರ್ನಾಟಕ' ಎಂಬ ಹೆಸರು ಬರಲು ಮತ್ತೆ ಹದಿನೇಳು ವರ್ಷ ಬೇಕಾಯಿತು ! ಅದರಲ್ಲೂ 'ಕರ್ಣಾಟಕ'ವೋ 'ಕರ್ನಾಟಕ'ವೋ ಎಂಬ ಚರ್ಚೆ.

ಗೋಕಾಕ್ ವರದಿ ಜಾರಿಯಾಗಬೇಕು; ಕರ್ನಾಟಕದಲ್ಲಿ ಕನ್ನಡಕ್ಕೆ ಅಗ್ರಸ್ಥಾನ ದೊರೆಯಬೇಕು. ಸರ್ಕಾರದ 'ಕನ್ನಡ ಪರೀಕ್ಷೆ ಮುನ್ನಾ' ಆಜ್ಞೆಯನ್ನು ತುಲನೆ ಮಾಡಬೇಕಾಗುತ್ತದೆ. ಸರ್ಕಾರಕ್ಕೆ ನಿಜವಾಗಿ ಕನ್ನಡ ಪ್ರೇಮ, ಜನತಾ ಪ್ರೇಮ, ಭಾಷೆಯ ಬಗ್ಗೆ ಹೆಮ್ಮೆ ಗೌರವ ಇದ್ದಿದ್ದಲ್ಲಿ, ಕಡ್ಡಾಯ ಕನ್ನಡ ಪರೀಕ್ಷೆಯನ್ನು ನೇಮಕಾತಿಗೆ ಮುನ್ನ ಅಧಿಕಾರಿಗಳಿಗೂ ವಿಸ್ತರಿಸಬೇಕಾಗಿತ್ತು.

ಹೀಗಿರುವಲ್ಲಿ ಬೇರೆ ರಾಜ್ಯಗಳಿಂದ ಇಲ್ಲಿ ಬಂದು ನೆಲೆಸಿದವರಿಗೆ ಮಾತ್ರ ಕನ್ನಡ ಕಲಿಯುವುದೆಂದರೆ ಆತಂಕ ! ಅಂದಾಗ ಸರ್ಕಾರಕ್ಕೆ ಕರ್ನಾಟಕದೊಳಗಿನ ಬಹುಸಂಖ್ಯಾತ ಜನರಿಗಿಂತ ಬಂದ ಅಲ್ಪಸಂಖ್ಯಾತರ ಬಗೆಗೇ ಹೆಚ್ಚಿನ ಕಾಳಜಿಯೇ ?

*

# ಖಂಡಿತವಾಗಿಯೂ ನಾನು ಕನ್ನಡ ಪಕ್ಷಪಾತಿ

ಕೊಂಡಜ್ಜಿ ಕೆ. ವೆಂಕಟೇಶ್

ನನ್ನ ಭಾಷೆ ಕನ್ನಡ. ಇದಕ್ಕೆ ಕಾರಣ ನನ್ನ ತಾಯಿಯ ಭಾಷೆ ಕನ್ನಡ, ನನ್ನ ತಂದೆಯ ಭಾಷೆ ಕನ್ನಡ ಅಷ್ಟೇ ಅಲ್ಲ ನಾನು ಹುಟ್ಟಿ ಬೆಳೆದು-ಇರುವುದು ಕನ್ನಡನಾಡಿನಲ್ಲಿ ಇದಕ್ಕಾಗಿ ಯೇ ನಾನು ಕನ್ನಡಿಗ. ಹೀಗೆಂದರೆ ನಿಮಗೆ ಆಶ್ಚರ್ಯ ವಾಗಬಹುದಲ್ಲವೆ? ನಗು ಬರಬಹುದ ಲ್ಲವೆ? ನಗಬೇಕಾದ್ದು-ಕನ್ನಡ ನಾಡಿನಲ್ಲಿ ಕನ್ನಡಕ್ಕೆ ಅಗ್ರಸ್ಥಾನ- ಕನ್ನಡ ಆಡಳಿತ ಭಾಷೆ ಎಂಬ ಸುದ್ಧಿ ಕೇಳಿದಾಗ ನಗ ಬೇಕು ಅಲ್ಲವೆ ]

ಒಂದು ಭಾಷೆ ಬೆಳೆಯಬೇಕಾದರೆ ರಾಜಕೀಯ ಪ್ರೋತ್ಸಾಹ ಅತ್ಯಗತ್ಯ. ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ ಅಭಿ ವೃದ್ಧಿ ಕಾಣಬೇಕಾದರೆ ನಾಡಿನ ಜನತೆ ಶ್ರಮವಹಿಸಿ ನಾಡಿಗಾಗಿ-ಭಾಷೆಗಾಗಿ ದುಡಿಯಬೇಕು.

ಕನ್ನಡ ಭಾಷೆ-ಎರಡು ಸಾವಿರ ವರ್ಷ ಗಳ ಇತಿಹಾಸ ಹೊಂದಿರುವ ಈ ಭಾಷೆಗೆ ವ್ಯವಹರಿಸಲು ಅಥವಾ ಶಿಕ್ಷಣ ಮಾಧ್ಯಮವನ್ನಾಗಿಸಲು ಸಮರ್ಥವಾ ಗಿಲ್ಲ ಎನ್ನುವುದು ನಾಚಿಕೆಗೇಡಿನ ಮಾತು. ಬಲವಂತವಾಗಿ ಕನ್ನಡವನ್ನು ಕಡ್ಡಾಯ ವಾಗಿ ಮಾಡಬೇಕು. ಆಗ ಭಾಷೆ ಬೆಳೆ ಯುತ್ತದೆ, ಕನ್ನಡಿಗನಿಗೆ ನ್ಯಾಯವಾಗಿ ದೊರಕಬೇಕಾದ ಸ್ಥಾನ ಮಾನ ದೊರಕು ತ್ತದೆ. ಈ ನಿಟ್ಟಿನಲ್ಲಿ ಯಾವುದೇ ಕುಂಟು ನೆಪಕ್ಕೆ ಹಾದಿ ಇರಕೂಡದು. ಇಲ್ಲಿ ಯಾವುದೇ ರಾಜಿಗೆ ನಾನು ವಿರೋಧಿ. ಆದುದರಿಂದಲೇ ನಾನು ಖಂಡಿತವಾ ಗಿಯೂ ಕನ್ನಡ ಪಕ್ಷಪಾತಿ.

ಸಾವಿರಾರು ವರ್ಷಗಳಿಂದ ಕನ್ನಡಿಗ ಕನ್ನಡ ಭಾಷೆಯನ್ನು ತನ್ನ ವ್ಯವಹಾರ ಮಾಧ್ಯಮವನ್ನಾಗಿ ಮಾಡಿಕೊಂಡು, ಬಳಸಿಕೊಂಡು ಬಂದಿರುವಾಗ ಇಂದು



ಕೊಂಡಜ್ಜಿ ಕೆ. ವೆಂಕಟೇಶ್

ಈ ಭಾಷೆಗೆ ಆಡಳಿತ ಭಾಷೆಯನ್ನಾಗಿ ಸಲು ಯೋಗ್ಯವಿಲ್ಲವೆನ್ನುವುದು, ಶಿಕ್ಷಣ ಮಾಧ್ಯಮಕ್ಕೆ ಸಾಧ್ಯವಿಲ್ಲವೆನ್ನುವುದು ಖಂಡಿತಾ ಮೂರ್ಖತನ ಮಾತು ಈ ಕಾರಣಕ್ಕಾಗಿಯೇ ನಾನು ಕನ್ನಡ ವಿರೋಧಿ ಮಾತುಗಳಿಗೆ ಯಾವ ಬೆಲೆ ಯನ್ನೂ ಕೊಡುವುದಿಲ್ಲ. *

# ಗ್ರಾಮಾಂತರ ದೇವಾಲಯುಗಳ ದುಃಸ್ಥಿತಿ

ಕೊಂಡಜ್ಜಿ ನಾಗಭೂಷಣ

ನಮ್ಮ ನಾಡಿನ ಜನರು 'ದೇವರು, ಧರ್ಮ, ಭಕ್ತಿ, ಶ್ರದ್ಧೆಯಲ್ಲಿ ಅಪಾರ ನಂಬಿಕೆ ಉಳ್ಳವರು. ಇಂತಹವರನ್ನು ಮೂಢನಂಬಿಕೆಯಲ್ಲಿ ಪ್ರಬಲ ವಿಶ್ವಾಸ ಉಳ್ಳ ಜನರೆಂದು ಅನ್ನೋಣವೇ ? ಇಲ್ಲಿ ಪ್ರಾಚೀನ ಸಂಸ್ಕೃತಿ ಉಳ್ಳ ಜನರೂ ಮತ್ತು ನಾಗರೀಕ ಸಂಸ್ಕೃತಿ ಉಳ್ಳ ಜನರೂ ಇದ್ದಾರೆ. ಈ ಪ್ರಾಚೀನ ಸಂಸ್ಕೃತಿ ಉಳ್ಳ ಜನರು ಒಂದೊಂದು ಪಾಳುದೇಗುಲಕ್ಕೂ ಒಂದೊಂದು ಕತೆ ಹೇಳುತ್ತಾರೆ. ಅದೇ ನಾಗರೀಕ ಸಂಸ್ಕೃತಿ ಉಳ್ಳ ಜನರು, ಹಳ್ಳಿಯಲ್ಲಿರುವ ಹತ್ತು ದೇಗುಲಗಳ ಬದಲು 'ಕೈ ಮುಗಿಯುವವರೆಗೆ, ಒಂದು ಸಣ್ಣ ಹೊಸ ದೇಗುಲವಿದ್ದರೆ ಸಾಕೆಂದು ವಾದಿಸುತ್ತಾರೆ. ಮತ್ತೆ ಕೆಲವರು 'ದೇವಸ್ಥಾನ ಮೂಢನಂಬಿಕೆಗೆ ಮೂಲ ಸ್ಥಾನ' ಎಂದು ಪ್ರಬಲವಾಗಿ ವಾದಿಸಬಹುದು, ಅದೇನೆ ಇದ್ದರೂ, ನಮ್ಮ ಜನರಲ್ಲಿ ಕೆಲವರು ಅರುಣೋದಯವಾದೊಡನೆ, ಸ್ನಾನ, ಸಂಧ್ಯಾ ವಂದನೆ, ಹಾಗೂ ದೇವರ ಪೂಜೆ ಮಾಡಿದರೆ ಮತ್ತೆ ಕೆಲವರು ಎದ್ದೊಡನೆ ಮುಖ ತೊಳೆದು ಸೂರ್ಯ ದೇವನಿಗೆ ವಂದಿಸಿ, ತಮ್ಮೂರಲ್ಲಿ ದೇವಸ್ಥಾನದಲ್ಲಿರುವ ದೇವರಿಗೆ ನಿಂತಲ್ಲೇ ಕೈಮುಗಿಯುವ ಸಂಪ್ರದಾಯವಿದೆ. 'ರಾಮ, ಕೃಷ್ಣ, ಶಿವಾ, ಅಲ್ಲಾ 'ಏಸು' ಎನ್ನದೇ ಯಾವ ಕೆಲಸವನ್ನೇ ಆಗಲಿ ಮಾಡಲು ಮುಂದುವರಿಯುವುದಿಲ್ಲ. ಅಂತಹ ಅಚಲ ವಿಶ್ವಾಸವನ್ನು ದೇವರ ಮೇಲಿಟ್ಟುಕೊಂಡು ಆ ದೇವರ ದಯೆಯಿಂದಲೇ ಎಲ್ಲಾ ಕೆಲಸಗಳು ಸುಸೂತ್ರವಾಗಿ ನಡೆಯುತ್ತದೆಂದು ಭಾವಿಸಿದ್ದಾರೆ.

ಇಷ್ಟೊಂದು ನಂಬಿಕೆಗೆ ಅರ್ಹವಾದ 'ದೇವರುಗಳು' ಹಳ್ಳಿಯ ದೇವಸ್ಥಾನಗಳು ನಾಶವಾಗಿವೆ. ಉಳಿದವು ನಾಶವಾಗುವ ಅಂಚಿನಲ್ಲಿವೆ. ಪಟ್ಟಣ ಮತ್ತು ನಗರಗಳ ದೇವಸ್ಥಾನ ಮತ್ತು ದೇವರುಗಳು ಶ್ರೀಮಂತವಾಗುತ್ತಿದ್ದರೆ, ಹಳ್ಳಿಯ ದೇವರು ಮತ್ತು ದೇವಸ್ಥಾನಗಳು ದುಃಸ್ಥಿತಿಗಿಳಿಯುತ್ತಿವೆ. ಸಾಮಾನ್ಯವಾಗಿ ಹಳ್ಳಿಗೊಂದು ಮತ್ತು ಅದಕ್ಕಿಂತಲೂ ಹೆಚ್ಚೆಚ್ಚು ದೇವಸ್ಥಾನಗಳಿರುವುದನ್ನು ನಾವು ನೋಡಿದ್ದೇವೆ. ಆದ್ದರಿಂದ ನಿಗಾ ವಹಿಸಿ ಈ ದೇವಾಲಯಗಳನ್ನು ರಕ್ಷಿಸಬೇಕಾಗಿದೆ. *



ಕೊಂಡಜ್ಜಿ ನಾಗಭೂಷಣ

# 'ಬೆಳ್ಳಿ ಹಬ್ಬದ ಸಮಾಜವಾದ'

ಇಂದಿಗೆ ಭಾರತದ ಸಮಾಜವಾದೀ ಚಳುವಳಿಗೆ ಐವತ್ತು ವರ್ಷ ತುಂಬಿದೆ. 'ಸಮಾಜವಾದ' ಇಂದು ಜಗತ್ತಿನಲ್ಲೆಲ್ಲಾ ಅತ್ಯಂತ ಜನಪ್ರಿಯ ಶಬ್ದ. ಆದರೆ ಹಾಗೆಂದರೇನು ಎನ್ನುವ ಬಗ್ಗೆ ಮಾತ್ರ ಬೇರೆ ಯಾವುದೇ ಶಬ್ದದ ಬಗ್ಗೆ ಇರದಷ್ಟು ಭಿನ್ನಾಭಿಪ್ರಾಯಗಳು ಈ ಶಬ್ದದ ಬಗ್ಗೆ ಇದೆ. ಇಂದು ಭಾರತದ ಎಲ್ಲಾ ರಾಜಕೀಯ ಪಕ್ಷಗಳು ಸಮಾಜವಾದದ ಘೋಷಣೆ ಮಾಡುತ್ತಿವೆ.

'ಸಮಾಜವಾದ' ಹಾಗೂ 'ಸಮಾಜವಾದಿ' ಈ ಶಬ್ದಗಳನ್ನು ಮೊಟ್ಟ ಮೊದಲಿಗೆ ಯಾರು ಬಳಸಿದರು ಎನ್ನುವುದು ಗೊತ್ತಿಲ್ಲ. ಈಗ ಗೊತ್ತಿರುವ ಮಟ್ಟಿಗೆ ಹೇಳಬೇಕೆಂದರೆ ಈ ಶಬ್ದಗಳು ಮೊಟ್ಟಮೊದಲಿಗೆ ಅಚ್ಚಾದದ್ದು 1803ರಲ್ಲಿ ಇಟಾಲಿಯನ್ ಭಾಷೆಯಲ್ಲಿ. ಇಲ್ಲಿಂದ ನಂತರ 1827ರವರೆಗೆ ಈ ಶಬ್ದದ ಸುಳಿವೇ ಸಿಕ್ಕುವುದಿಲ್ಲ. 1827ರಲ್ಲಿ ಓವೆನ್ ವಾದಿಗಳ ಸಹಕಾರಿ ಪತ್ರಿಕೆಯಲ್ಲಿ 'ಸಮಾಜ ವಾದಿ' ಪದವನ್ನು ಬಳಸಲಾಯಿತು. ಓವೆನ್ ಸಹಕಾರಿ ತತ್ವಗಳನ್ನು ಅನುಸರಿಸುವ ಜನರನ್ನು ನಿರ್ದೇಶಿಸಲು ಈ ಶಬ್ದವನ್ನು ಬಳಸಲಾಗಿತ್ತು. ಅಲ್ಲಿಂದ ಮುಂದೆ 1830ರಲ್ಲಿ ಫ್ರೆಂಚ್ ಪತ್ರಿಕೆ 'ಲಗ್ಲೋಬ್‌ನಲ್ಲಿ' ಸಂಪಾದಕ ಪಿಯರ್‌ಲಿರೊ ಸ್ಯಾಂ ಸಿಮೋಂನ ಸಿದ್ಧಾಂತಗಳನ್ನು ನಿರ್ದೇಶಿಸಲು ಈ ಶಬ್ದಗಳನ್ನು ಬಳಸಿಕೊಂಡಿದ್ದ.

ಜಗತ್ತಿನ ಬಹುಸಂಖ್ಯೆ ರಾಷ್ಟ್ರಗಳು ಅದರಲ್ಲೂ ಮೂರನೆ ಜಗತ್ತಿನ ಬಹು ಸಂಖ್ಯೆ ರಾಷ್ಟ್ರಗಳು ಸಮಾಜವಾದವನ್ನೇ ತಮ್ಮ ಗುರಿ ಎಂದು ಘೋಷಿಸುತ್ತಿವೆ.

1930ರ ದಶಕದಲ್ಲಿ ಲೆಕೋ ಹಾಗೂ ರೇನೋ ತಮ್ಮ 'ನೋವಲ್ಲಎನ್‌ಸೈಕ್ಲೊಪೀತಯ' ಮತ್ತು ಇತರ ಬರವಣಿಗೆಗಳಲ್ಲಿ ಈ ಶಬ್ದವನ್ನು ಮುಕ್ತವಾಗಿ ಬಳಸಿದರು. ನಂತರ ಅಲ್ಪಕಾಲದಲ್ಲಿಯೇ ಮಾನವ ಹಕ್ಕುಗಳ ಆರ್ಥಿಕ ಹಾಗೂ ಸಾಮಾಜಿಕ ಪರಿಕಲ್ಪನೆಗಳ ಆಧಾರದ ಮೇಲೆ ನಿಂತಿರುವ ಒಂದು ಹೊಸ ಸಮಾಜ ವ್ಯವಸ್ಥೆಯನ್ನು ಬಯಸುವ ಹಲವಾರು ಗುಂಪುಗಳು ಸೇರುವಂತೆ ಒಂದು ವಿಶಾಲ ಅರ್ಥದಲ್ಲಿ ಈ ಶಬ್ದವನ್ನು ಬಳಸುವುದು ಪ್ರಾರಂಭವಾಯಿತು.

ಸಮಾನತೆಯ ಆಧಾರದ ಮೇಲೆ ರಚಿಸಲಾಗುವ ಒಂದು ಹೊಸ ಸಮಾಜ ವ್ಯವಸ್ಥೆಯ ರೂಪರೇಷೆ ಎಂದು ಹಲವರು ಸಮಾಜವಾದವನ್ನು ನಿರ್ವಹಿಸಿದರೆ ಬಂಡವಾಳವಾದಿ ಶೋಷಣೆ ಇಲ್ಲದ ಸಮಾಜವಾದ ಈ ರೀತಿ ಹಲವರಿಗೆ ಗುರಿಯೂ ಇನ್ನು ಹಲವರಿಗೆ ದಾರಿಯೂ ಆಗುತ್ತದೆ.

(ಸಂಗ್ರಹ) – ಬುಕ್ಕಾಂಬುಧಿ ಸತ್ಯನಾರಾಯಣ

# ಸಾಮಾನ್ಯ ಜ್ಞಾನ

ಕನ್ನಡ ಶೈಕ್ಷಣಿಕ ಮಾಸ ಪತ್ರಿಕೆ

ಎಲ್ಲಾ ವಿದ್ಯಾರ್ಥಿಗಳಿಗೂ, ಉಪಾಧ್ಯಾಯರಿಗೂ, ಕೆ. ಪಿ. ಎಸ್. ಸಿ. ಮುಂತಾದ ಪರೀಕ್ಷೆಗಳಿಗೆ ಅತ್ಯಗತ್ಯವಾದ ಏಕೈಕ ಕನ್ನಡ ಮಾಸ ಪತ್ರಿಕೆ

ವಿಜ್ಞಾನ, ಭೂಗೋಳ, ಚರಿತ್ರೆ, ಸಂಶೋಧನೆ

ಮುಂತಾದ ಬಗೆಗೆ ಲೇಖನಗಳು, ಮಾಹಿತಿಗಳು

ಹಾಗೂ ವಿಚಾರಪೂರ್ಣ ಲೇಖನಗಳು ಕೂಡಿದ ಪತ್ರಿಕೆ

ಇಂದೇ ಚಂದಾದಾರರಾಗಿರಿ :

**ಆಜೀವ ಸದಸ್ಯತ್ವ ರೂ. ೧೦೧/-**

**ವಾರ್ಷಿಕ ಸದಸ್ಯತ್ವ ರೂ. ೧೦/-**

ವಿವರಗಳಿಗೆ ಬರೆಯಿರಿ :

ಸಂಪಾದಕರು
'ಸಾಮಾನ್ಯ ಜ್ಞಾನ'
ಕನ್ನಡ ಶೈಕ್ಷಣಿಕ ಮಾಸಪತ್ರಿಕೆ
216, ಸುಬ್ರಮಣ್ಯನಗರ
ಬೆಂಗಳೂರು-560 021

'SAMANYA GNANA' Kannada Rajyotsava Special 1983-84 Regd. No. KRNB 483